ಪುರ | ಈ ಮೂರು ಗ್ರಾಮಕ್ಕೂ ಮಧ್ಯದ ಹುಲ್ಲೆ ಬೊಮ್ಮನ ಮೂಡಣ ದಡದಲ್ಲಿ ಪೂರ್ವ ಮುಖವಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ಆಗ್ನೇಯ | ಗ್ರಾಮಕ್ಕೆ ಮೂಡಲು ಕಸವನಹಳ್ಳಿ ಯೆಲ್ಲೆಗಲ್ಲಿನ ಬಳಿಯ ನೈಋತ್ಯ ಮುಖವಾಗಿ ನೆಟ್ಟ ಕಲ್ಲು | ೧ | ಅಂತು ಮಾಕರಪುರಗ್ರಾಮಕ್ಕೆ ನೆಟ್ಟ ಕಲ್ಲು ೧೨ ||

ನವಿಲೂರು ಗ್ರಾಮಕ್ಕೆ | ಊರಬಾಗಲಲ್ಲಿ ಪೂರ್ವಮುಖವಾಗಿ ನೆಟ್ಟ ಕಲ್ಲು | ೧ | ಗ್ರಾಮಕ್ಕೆ ವಾಯುವ್ಯ ಯೆಚಗುಂಡಲ ಗ್ರಾಮಕ್ಕೆ ನೈಋತ್ಯ | ಬೇಳೂರದೆಲ್ಲೆಗೆ ಮೂಡಲು | ಈ ಮೂರು ಗ್ರಾಮದ ಕೂಡಿದ ಎಲ್ಲೆ ಒಬ್ಬೆಯಲ್ಲಿ ವೀರಭದ್ರನ ಕೊಡಿಗೆ ಲಿಂಗ ಮುದ್ರೆ ಕಲ್ಲಬಳಿಯ ತೆಂಕ ಮುಖವಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ಮೂಡಲು ಗ್ರಾಮಕ್ಕೆ ಪಡುವಣ ದಿಕ್ಕು | ಯೇಚಗುಂಡಲ ದೆಲ್ಲೆ ಕೂಡಿದ ಬಳಿಯ ತೆಂಕಮುಖವಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ತೆಂಕಲು | ಊರಿಗೆ ವಾಯುವ್ಯ | ಯೇಚ ಗುಂಡಲದೆಲ್ಲೆ ಕೂಡಿದ ತೆಂಕಣೊಬ್ಬೆಯಲ್ಲಿ ತೆಂಕ ಮುಖವಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ಮೂಡಲು | ಊರಿಗೆ ವಾಯುವ್ಯ | ಯೇಚಗುಂಡಲ ಕೂಡಿದ ಎಲ್ಲೆ ಮೆಳೆ ಗೊತ್ತಲ ಹೊಲದ ತೆಂಕಣ ಒಬ್ಬೆಯಲ್ಲಿ ತೆಂಕ ಮುಖವಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ಮೂಡಲು ಊರಿಗೆ ಬಡಗಲು | ಯೇಚಗುಂಡಲಕ್ಕೆ ಆಗ್ನೇಯ ಕಲ್ಲಕಟ್ಟೆ ಮೂಡಣ ಕೂಡಿದೆಲ್ಲೆ ಮಾಳದಲ್ಲಿ ತೆಂಕ ಮುಖವಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ಮೂಡಲು | ಊರಿಗೆ ಉತ್ತರ | ಕಳಲೆದಾರಿ | ಯೇಚಗುಂಡಲಕ್ಕಾಗ್ನೇಯವಾದ ಕಡೆ ಎಲ್ಲೆಮಾಳದ ತೆವರಿನಲ್ಲಿ ತೆಂಕ ಮುಖವಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ದಕ್ಷಿಣ ಊರಿಗೆ ಉತ್ತರ ಮುದ್ದನಹಳ್ಳಿಗೆ ಪಶ್ಚಿಮವಾದ ಕೂಡಿದೆಲ್ಲೆಯ ಹಳೆ ಚಕ್ರಮುದ್ರೆ ಕಲ್ಲಿನಬಳಿ ನೆಟ್ಟ ವಾಮನಮುದ್ರೆ ಕಲ್ಲು | ೧ | ಈ ಕಲ್ಲಿಗೆ ದಕ್ಷಿಣ | ಊರಿಗೆ ಈಶಾನ್ಯ ಮುದ್ದನಹಳ್ಳಿಗೆ ಪಡುವಣಮೂಲೆ ತೆವರ ಅಡ್ಡ ಒಬ್ಬೆ ಹಳೆ ಕಲ್ಲಿನಬಳಿಯ ಪಡುವ ಮುಖವಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ತೆಂಕಲು ಊರಿಗೆ ಪಡುವಲು | ಮುದ್ದನಹಳ್ಳಿ ಯೆಲ್ಲೆ ಕೂಡಿದ | ತೆಂಕ ಬಡಗ ಒಬ್ಬೆ ಮೂಡಣ ತೆವರಿನಲ್ಲಿ ಪಡುವ ಮುಖವಾಗಿ ನೆಟ್ಟ ಕಲ್ಲು | ೧ | ಅಂತು ನವಿಲೂರಿಗೆ ನೆಟ್ಟ ಕಲ್ಲು ೧೦ ||

ಹೊಸಪುರದ ಕೊಪ್ಪ ನವಿಲೂರೆಲ್ಲೆಗಲ್ಲಿಗೆ ಬಡಗಲು ಊರಿಗೆ ಮೂಡಲು | ಮುದ್ದನಹಳ್ಳಿಗೆ ತೆಂಕಣ ಕೂಡಿದೆಲ್ಲೆ ಗಟ್ಟನ ಮೂಕನ ಆಲದತಾಳ ಮೂಡಣಾರಿ ಹಳೆ ಕಲ್ಲಿನ ಬಳಿಯ ಪಡುವ ಮುಖವಾಗಿ ನೆಟ್ಟಕಲ್ಲು | ೧ | ಈ ಕಲ್ಲಿಗೆ ತೆಂಕಲು ಊರಿಗೆ ಮೂಡಲು ಎಲಚಗೆರೆಗೆ ವಾಯುವ್ಯವಾದ ಕೂಡಿದೆಲ್ಲೆ ಬಳಗಾರನ ಕಟ್ಟೆಗೆ ಮೂಡಣ ದಡದಲ್ಲಿ ಪಡುವ ಮುಖವಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ದಕ್ಷಿಣ | ಊರಿಗೆಆಗ್ನೇಯ | ಕೂಗಲೂರಿಗೆ ಈಶಾನ್ಯವಾದ ಕೂಡಿದೆಲ್ಲೆಗಟ್ಟನ ಲಿಂಗಮುದ್ರೆಕಲ್ಲಿನ ಬಳಿಯ ಬಡಗ ಮುಖವಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ಪಡುವಲು | ಊರಿಗೆ ತೆಂಕಲು ಕೂಗಲೂರಿಗೆ ಬಡಗಣ ಕೂಡಿದೆಲ್ಲೆ ಒಬ್ಬೆ ಆಲತ್ತಾಳಿಗೆ ಮೂಡಲಲ್ಲಿ ಬಡಗ ಮುಂತಾಗಿ ನೆಟ್ಟ ಕಲ್ಲು | ೧ | ಈ ಕಲ್ಲಿಗೆ ಪಡುವಲು | ಹೊಸಪುರಕ್ಕೆ ತೆಂಕಲು | ಲಕ್ಷ್ಮಣಪುರಕ್ಕೆ ಬಡಗಣ ಒಬ್ಬೆ ಲಿಂಗಮುದ್ರೆ ಕಲ್ಲಿನಬಳಿ ಕೋಡನಕಟ್ಟೆ ದಡದಲ್ಲಿ ಬಡಗ ಮುಂತಾಗಿ ನೆಟ್ಟಕಲ್ಲು | ೧ | ಈ ಕಲ್ಲಿಗೆ ಪಡುವಲು ಊರಿಗೆ ನೈಋತ್ಯ ಲಕ್ಷ್ಮಣಪುರಕ್ಕೆ ಬಡಗಲಾದ ಕೂಡಿದೆಲ್ಲೆ ಮೂಡ ಪಡುವಹೆಡೆ ಮೂಲೆ ಕೋಡನಕಟ್ಟೆ ದೊಡ್ಡಾಲತ್ತಾಳಿಗೆ ಪಶ್ಚಿಮದಲ್ಲಿ ಬಡಗ ಮುಂತಾಗಿ ನೆಟ್ಟಕಲ್ಲು | ೧ | ಊರಿಗೆ ಬಡಗಲು ನವಿಲೂರಿಗೆ ತೆಂಕಲು ಈ ಕೂಡಿದೆಲ್ಲೆಗೆ ಮಧ್ಯದ ಒಣಿ ಬಳಿಯ ತೆಂಕ ಮುಖವಾಗಿ ನೆಟ್ಟ ಕಲ್ಲು | ೧ | ಊರಬಾಗಿಲಲ್ಲಿ ಪೂರ್ವ ಮುಖವಾಗಿ ನೆಟ್ಟ ಕಲ್ಲು | ೧ | ಅಂತು ಹೊಸಪುರಕ್ಕೆ ನೆಟ್ಟಕಲ್ಲು ೮ ||

ಇಂತು ಕುಮಾರೋತ್ಸವ ಸಮಯ ದತ್ತವಾದ ಮೂರು ಗ್ರಾಮಂಗಳ ಬಾಗಿಲಲ್ಲಿ ವಾಮನ ಮುದ್ರೆಕಲ್ಲು ೪ ಚತುಸ್ಸೀಮೆಗೆ ನೆಟ್ಟಕಲ್ಲು ೨೪ ಉಭಯಂ ಕಲ್ಲು ೩೦ ಪ್ರಾಕು ವಿವಾಹೋತ್ಸವ ಸಮಯ ದತ್ತವಾದ ಮೂರು ಗ್ರಾಮಂಗಳ ಊರುಬಾಗಿಲ ಚತುಸ್ಸೀಮೆ ಸಹ ೪೦ ಉಭಯಂ ಕಳಲೆ ಅಪ್ರತಿಮ ಕೃಷ್ಣರಾಜಸಮುದ್ರ ಅಗ್ರಹಾರದ ೪೪ ವೃತ್ತಿಗೆ ಸಲುವ ೬ ಗ್ರಾಮಗಳ ಊರು ಬಾಗಲಿಗೆ ಚತುಸ್ಸೀಮೆಗೆ ಸಹ ನೆಟ್ಟ ವಾಮನ ಮುದ್ರೆ ಕಲ್ಲು ೬೦.

ಇಂತೀ ಚತುಸ್ಸೀಮಾಪ್ರದೇಶ ಪ್ರತಿಷ್ಠಾಪಿತ ಶಿಲಾಪರಿವೇಷ್ಟಿತಂಗಳಾದ ಗ್ರಾಮಂಗಳಾರರ ಚತುಸ್ಸೀಮೆಯೊಳಗುಳ್ಳ ಗದ್ದೆ ಬೆದ್ದಲು ತೋಟತುಡಿಕೆ ಅಣೆ ಅಚ್ಚುಕಟ್ಟು ಕಾಡಾರಂಬ ನೀರಾರಂಬ ಮಗ್ಗ ಮನೆ ವಣಸುಂಕ ಪೊಮ್ಮು ಸುವರ್ಣಾದಾಯ ಕಾಣಿಕೆ ಬೇಡಿಗೆ ಹುಲ್ಲುಪಣ ಹೊಗೆಪಣ ಹೊಗೆ ಕಾಣಿಕೆ ಕುರಿದೆರಿಗೆ ಜಾತಿಕೂಟ ದೇವರಾಯವಟ್ಟ ಹೆಚ್ಚುಬೇಡಿಗೆ ಗ್ರಾಮಾದಾಯ ಚೆರಾದಾಯ ಹೊರಾದಾಯ ಊಳಿಗಮಾನ್ಯ ಇವು ಮೊದಲಾದ ಸಕಲ ಸ್ವಾಮ್ಯವನು ಈ ಅಪ್ರತಿಮ ಕೃಷ್ಣರಾಜಸಮುದ್ರಾಗ್ರಹಾರದ ೪೪ ವೃತ್ತಿ ಮಹಾಜನಂಗಳು ಸರ್ವಮಾನ್ಯವಾಗಿ ಶಾಶ್ವತವಾಗಿ ತಂತಮ್ಮ ಪುತ್ರ ಪೌತ್ರ ಪಾರಂಪರ್ಯವಾಗಿ ಆಚಂದ್ರಾರ್ಕ ಸ್ಥಾಯಿಗಳಾಗಿ ಈ ಭೂಮ್ಯಾಕಾಶಂಗಳುಳ್ಳನ್ನೆಗಂ ನಿರುಪಾಧಿಕವಾಗಿ ಸುಖದಿಂದನುಭವಿಸಿಕೊಂಡು ಬಹರು ಇಂತೀ ೬ ಗ್ರಾಮಗಳ ಚತುಸ್ಸೀಮೆಯೊಳಗಿರ್ಪ ನಿಧಿ ನಿಕ್ಷೇಪ ಜಲ ತರು ಪಾಷಾಣ ಅಕ್ಷೀಣ್ಯಾಗಾಮಿ ಸಿದ್ಧಸಾಧ್ಯಂಗಳೆಂಬಷ್ಟಭೋಗತೇಜಸ್ವಾಮ್ಯಂಗಳುಂ ಈ ೪೪ ವೃತ್ತಿ ಮಹಾ ಜನಂಗಳ್ಗೆ ಶಾಶ್ವತವಾಗಿ ಸಲುವುದು | ಇಲ್ಲಿಂದಂ ಮುಂದೀ ೪೪ ವೃತ್ತಿಯುಮೀ ಮಹಾಜನಂಗಳ ಮಾಡುವ ಆಧಿಕ್ರಯದಾನ ಪರಿವರ್ತನೆಗಳೆಂಬ ವ್ಯವಹಾರ ಚತುಷ್ಟಯಕ್ಕಂ ಸಲುವುದು | ಇಂದು ಮೊದಲೀ ೬ ಗ್ರಾಮಗಳಲ್ಲಿಯು ಮುಂಟಾದ ಸಕಲ ಸ್ವಾಮ್ಯಗಳನು ಈ ೪೪ ವೃತ್ತಿ ಮಹಾಜನಂಗಳೆಲ್ಲರುಮಿವರಿವರ ಪುತ್ರ ಪೌತ್ರ ಪಾರಂಪರ್ಯವಾಗಿ ಶಾಶ್ವತವಾಗಿ



ಸುಖದಿಂದನುಭವಿಸಿಕೊಂಡು ಬಹರು ಎಂದು ಆತ್ರೇಯಗೋತ್ರ ಶಿಖರಾಲಂಕಾರಕಲ್ಪಶಾಖೆಯುಮಾಶ್ವಲಾಯನ ಸೂತ್ರ ಶೋಭಾವಹ ಸುಪರ್ವಮಣಿಯುಂ ಋಕ್ಛಾಖಾಪ್ರಖ್ಯಾಪಕ ಸುಧಾರಸ ಫಲಮುಮೆನಿಸಿ ಪ್ರಸಿದ್ಧಿವೆತ್ತ ಚಿಕದೇವರಾಜೊಡೆಯರವರ ಪೌತ್ರರುಂ ಕಂಠೀರವ ನರಸರಾಜೊಡೆಯರವರ ಸುಪುತ್ರರುಂ ಚಲ್ವಾಜಮ್ಮಾಂಬಾ ಗರ್ಭಾಮೃತಾಂಬುಧಿ ರಾಕಾಸುಧಾಕರರುಮಾದ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಬಿರುದಂತೆಂಬರ ಗಂಡ ಧರಣೀವರಾಹ ಬಿರುದನುದ್ದಂಡ ದೋರ್ದಂಡ ಸಂಗ್ರಾಮರಾಮ ಯಾದವಕುಲೋದ್ಧರಣ ಧುರೀಣ ಕರ್ನಾಟಕಚಕ್ರವರ್ತಿ ಶ್ರೀವೈಷ್ಣವಮತ ಪ್ರತಿಷ್ಠಾಪಕ ನಿರಂಕುಶ ಬಲಪರಾಕ್ರಮ ಪ್ರಚಂಡ ನಿಜಭುಜಾದಂಡ ಪ್ರಕಂಪಿತ ನಂದಕಾಖಡ್ಗೋದ್ದಂಡ ಮಂಡಲಾಗ್ರಪ್ರಭೂತ ಪ್ರತಾಪಾನಲ ಶಲಭಾಯಿ ತಸಿದ್ಧೋಜಿಪ್ರಮುಖ ಮಹಾರಾಷ್ಟ್ರ ನೃಪಾಲಜಾಲರಿಪುಜಯೈಕಲೀಲ ದುರ್ದಾಂತಸಾಮಂತ ಭೂಕಾಂತ ಮೌಳಿಮಣಿಶ್ರೇಣಿ ನೀರಾಜಿತ ನಿಜಚರಣ ದೈನಂದಿನ ಪೂರ್ವಾಹ್ಣವಿಶ್ರಾಣಿತಾನೇಕ ಮಹಾದಾನಶೌರ್ಯೈಕನಿಧಾನ [ಲೋಕೈಕವೀರ ವೀರರೊಳ್ಗಂಡನೆಂತೆಂಬರಗಂಡನುಮೆನಿಪ ಜಗದ ಬಿರುದ ಮಹೀಶೂರಪ್ರತಿಮ ಕೃಷ್ಣರಾಜೊಡೆಯರವರು ತಮ್ಮ ಕಲ್ಯಾಣೋತ್ಸವದಲ್ಲಿಯುಂ ಕುಮಾರ ಜನ್ಮೋತ್ಸವದಲ್ಲಿಯುಂ ಉಭಯ ಕಾವೇರಿಮಧ್ಯದ ಗೌತಮಕ್ಷೇತ್ರದ ಪಶ್ಚಿಮ ರಂಗನಾಥಸ್ವಾಮಿಯುವರ ಚರಣಾರವಿಂದಗಳ ಸನ್ನಿಧಿಯಲ್ಲಿ ಶ್ರೀಲಕ್ಷ್ಮೀಕಾಂತನಾದ ಶ್ರೀಮನ್ನಾರಾಯಣ ಪ್ರತ್ಯಕ್ಷವಾಗಿ ನಾನಾಗೋತ್ರದ ನಾನಾಸೂತ್ರದ ನಾನಾಶಾಖೆಯ ನಾನಾನಾಮಧೇಯದೀ ಅಪ್ರತಿಮ ಕೃಷ್ಣರಾಜಸಮುದ್ರಾಗ್ರಹಾರದ ೩೩ ವೃತ್ತಿ ಮಹಾ ಜನಂಗಳ್ಗೆ ಈ ೬ ಗ್ರಾಮಂಗಳಂ ಸಹಿರಣ್ಯೋದಕವಾಗಿ ತುಳಸೀದಳಯುಕ್ತವಾಗಿ ಶ್ರೀಕೃಷ್ಣಾರ್ಪಣವೆಂದು ಧಾರೆಯೆರೆದು ತಾವು ಮಾಡಿದೀ ಅಗ್ರಹಾರವು ಶಾಶ್ವತವಾಗಿ ಆಚಂದ್ರಾರ್ಕವಾಗಿ ಸರ್ವಮಾನ್ಯವಾಗಿ ನಡೆಯುತ್ತಿರಲಿ ಎಂದು ಧರಣೀವರಾಹ ಮುದ್ರಾಸಹಿತವಾಗಿ ಸ್ವಹಸ್ತಾಕ್ಷರಂಗಳಿಂದ ಸ್ವನಾಮಸ ಚಿಹ್ನೆಗೈಯುದ್ದ ಬರಸಿಕೊಟ್ಟ ಭೂದಾನ ತಾಮ್ರಶಾಸನ ||

ಏಕೈವಭಗಿನೀಲೋಕೇಸರ್ವೇಷಾಮೇವಭೂಭುಜಾಂ | ನಭೋಜ್ಯಾನಕರಗ್ರಾಹ್ಯಾವಿಪ್ರದತ್ತಾವಸುಂಧರಾ || ೧ || ದಾನಪಾಲನಯೋರ್ಮಧ್ಯೇದಾನಾಚ್ಛ್ರೇಯೋನುಪಾಲನಂ | ದಾನಾತ್ಸ್ವರ್ಗಮವಾಪ್ನೋತಿಪಾಲನಾದಚ್ಯುತಂಪದಂ || ೨ || ಸ್ವದತ್ತಾದ್ದ್ವಿಗುಣಂಪುಣ್ಯಂ ಪರದತ್ತಾನುಪಾಲನಂ | ಪರದತ್ತಾಪಹಾರೇಣ ಸ್ವದತ್ತಂನಿಷ್ಫಲಂಭವೇತ್ || ೩ || ಸ್ವದತ್ತಾಂಪರದತ್ತಾಂವಾ ಯೋಹರೇತವಸುಂಧರಾಂ | ಷಷ್ಟಿರ್ವರ್ಷಸಹಸ್ರಾಣಿ ವಿಷ್ಠಾಯಾಂಜಾಯತೇಕ್ರಿಮಿಃ || ೪ || ಇಂದ್ರಃಪೃಚ್ಛತಿಚಂಡಾಲೀಂಕಿಮಿದಂ ಪಚ್ಯತೇಶುಭೇ | ಶ್ವಮಾಂಸಂಸುರಯಾಸಿಕ್ತಂಕಪಾಲೇನಚಿತಾಗ್ನಿನಾ || ೫ || ಕಿಮರ್ಥಂವದಕಲ್ಯಾಣಿ ಚರ್ಮಣಾಪಿಹಿತಂತ್ವಯಾ | ಬ್ರಹ್ಮಸ್ವಂಬ್ರಹ್ಮಕ್ಷೇತ್ರಂ ಹಾರಯಂತಿಹರಂತಿಯೇ || ೬ || ತೇಷಾಂಪಾದರಜೋಭೀತ್ಯಾ ಚರ್ಮಣಾಪಿಹಿತಂಮಯಾ || ೭ || ಇಮಂಧರ್ಮಂಚಯೇಘ್ನಂತಿಯೇಚತತ್ಸಹಕಾರಿಣಃ | ಕಿರಾತಮ್ಲೇಚ್ಛಚಂಡಾಲಚರ್ಮಕಾರಾತ್ಮಜಾಸ್ತುತೇ || ೮ || ಬಹುಭಿರ್ವಸುಧಾಭುಕ್ತಾರಾಜಭಿಸ್ಸಗರಾದಿಭಿಃ | ಯಸ್ಯಯಸ್ಯಯದಾಭೂಮಿ ಸ್ತಸ್ಯತಸ್ಯತದಾಫಲಂ | ಸಾಮಾನ್ಯೋಯಂಧರ್ಮಸೇತುರ್ನೃಪಾಣಾಂ ಕಾಲೇಕಾಲೇ ಪಾಲನೀಯೋಭವದ್ಭಿಃ | ಸರ್ವಾನೇತಾನ್ಭಾವಿನಃಪಾರ್ಥಿವೇಂದ್ರಾನ್ಭೂಯೋಭೂಯೋ ಯಾಚತೇರಾಮಚಂದ್ರಃ || ೯ || ಮದ್ವಂಶಜಾವಾನ್ಯಕುಲೋದ್ಭವಾವಾ ರಕ್ಷಂತಿಯೇಧರ್ಮಮಿಮಂನೃಪಾಲಾಃ | ತೇಷಾಂತುನಿತ್ಯಂಸಹರಿರ್ದದಾತು ಸಂತಾನವೃದ್ಧಿಂಭುವನಾಧಿಪತ್ಯಂ || ೧೦ || ಶ್ರೀರಾಮಾಯಣಭಾರತಪಾರಾಯಣವಿಹಿತವೃತ್ತಿನಾಕೃತಿನಾ | ಕವಿನಾತಿರುಮಲೆಯಾಚಾರ್ಯೇಣೇದಂತಾಮ್ರಶಾಸನಂಲಿಖಿತಂ || ೧೧ || · · ಶ್ರೀಕೃಷ್ಣರಾಜೇಂದ್ರಃಪಾಲಯನ್ನಖಿಲಾಂಮಹೀಂ | ಜಯತ್ವಸೌಪುಸ್ತೋಮಕರಿಕಣ್ಠೀರವಾಕೃತಿಃ || ೧೨ || ಧರ್ಮಾಸ್ಸುಸ್ಥಿರತಾಂಯಾಂತುಕೃಷ್ಣರಾಜಮಹೀಪತೇಃ | ಯಾವದ್ಧರಾಧರಾಧಾರಾಯಾವಚ್ಚಂದ್ರದಿವಾಕರೌ || ೧೩ ||

ಶ್ರೀಕೃಷ್ಣರಾಜಃ.

## 296

### ಅದೇ ರಂಗಸ್ವಾಮಯ್ಯಂಗಾರ್ರು ಹಾಜರ್ ಮಾಡಿದ ಸನ್ನದು.

1 ಶ್ರೀಶೈಲಗುರುವೇನಮಃ || ಶ್ರೀರಾಮ || ಶುಭಮಸ್ತು || ಶೋಭನಮಸ್ತು || ನಿರ್ವಿಘ್ನಮಸ್ತು ||
2 ಶುಭಮಸ್ತು || ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರುಷಂಗಳು ೧೬೪೨ ಸಂದವರ್ತಮಾನವಾದ
3 ಶಾರ್ವರಿನಾಮ ಸಂವತ್ಸರದ | ಮಾರ್ಗಶಿರಶು ೧೪ ಶುಕ್ರವಾರ ರೋಹಿಣಿ ನಕ್ಷತ್ರದಲ್ಲೂ ||| ಶ್ರೀಮನ್ಮಹಾರಾಜಾಧಿ |
4 ರಾಜ ರಾಜಪರಮೇಶ್ವರ ಪ್ರಹುಢಪ್ರತಾಪನಪ್ರತಿಮವೀರನರಪತಿ || ಶ್ರೀಕೃಷ್ಣರಾಜವಡೆಯರಯ್ಯನವರು || ಹೊಯ
5 ಶಳದೇಶ ಕುರುವಂಕನಾಡುಸ್ತಳಯಪತ್ತಿಟ್ಟನಹೋಬಳಿಗೆಉತಮಕ್ಷೇತ್ರಉಭಕಾವೇರಿಮಧ್ಯಪಶ್ಚಿಮರಂಗನಾಥಸ್ವಾಮಿಯ
6 ವರ ಶ್ರೀರಂಗಪಟ್ಟಣದಲ್ಲೂ | ರತ್ನಸಿಂಹಾಸನಾರೂಢರಾಗಿ | ಸುಖದಿಂ ಪೃಥ್ವಿಸಾಂಬ್ರಾಜ್ಯಂ ಗೈಯುತ್ತಿರಲು || ಶ್ರೀಮ
7 ನ್ಮಹಾದೇವದೇವೋತ್ತಮದೇವತಾಸಾರ್ವಭೌಮರಾದ ಕಳಲೆಯ || ಲಕ್ಷ್ಮೀಕಾಂತಸ್ವಾಮಿಯವರ ಶ್ರೀಭಂಡಾರ

8 ಕ್ಕೆ | ಕೌಶಿಕಗೋತ್ರ ಆಪಸ್ತಂಭಸೂತ್ರ | ಯಜುಶ್ಶಾಖಾಧ್ಯಾಯಿಗಳಾದ | ಕಂದ್ಯಾಳ ಕೇಶವೈಯಂಗ್ಗಾರಪೌತ್ರ | ಯೆಂ
9 ಬೆರುಮಾನಾರಪುತ್ರ | ತಿರುಮಲಾಚಾರುಬರಯುಸಿಕೊಟ್ಟ | ವೃತ್ತಿಕ್ರಯದಾನ ಸಾಧನಕ್ರಮವೆಂತೆಂದ್ದರೆ ||
10 ಮೂಗೂರುಸ್ತಳಕ್ಕೆಸಲುವಕೆಲ್ಲೂರಿಗೆಪ್ರತಿನಾಮಧೇಯವಾದಚಾಮರಾಯಸಮುದ್ರವೆಂಬ್ಬ ಅಗ್ರಹಾರ
11 ದಲ್ಲೂ | ಗಣಸಂಖೆ ಪಂಚ್ಚಾಶ ೧೪ಕ್ಕೆ ವೃತ್ತಿ ೩೦ರೊಳಗೆ ನಮಿಗೆ | ತ್ತಿರುಮಲಯ್ಯಂಗ್ಗಾರಯ್ಯನವರಿಂದಾ ಧಾ
12 ರಾಗ್ರುಹಿತವಾಗಿಬಂದ್ದ | ವೃತ್ತಿ ೧೦|| ವೊಳಗೆ ನಮಿಗೆ ಸಲುವದು ನಾಲ್ಕೂವರೆಪಾಲುವೇರೆಗೆಸಲೂದು ವೃತ್ತಿ
13 ೫|—ಕಾಣಿಯಿಯೆರಡೂಹಾಗೂವೀಸೂಕಾಣಿಗೆಸಲುವೃತ್ತಿಯಂನ್ನು || ಲಕ್ಷ್ಮೀಕಾಂತ್ತಸ್ವಾಮಿಯವರಶ್ರೀಭಂ
14 ಡ್ಡಾರಕ್ಕೆಶುದ್ಧಕ್ರಯದಾನವಾಗಿಸಮರ್ಪ್ಪಿಸಿದೆನಾಗಲಾಗಿ | ಯಿಾ ಯೆರಡೂಹಾಗೂವೀಸೂಕಾಣಿಗೆಸಲೂಕ್ರಯ
15 ತತ್ಕಾಲೋಚಿತಮಧ್ಯಸ್ತಪರಿಕಲ್ಪಿತಕ್ರಯಲಕ್ಷಣಲಕ್ಷಿತೋಭಯವಾದಿಸಂಪ್ರತಿಪಂನ್ನಕ್ರಯದ್ರವ್ಯಪರಿಮಾಣ
16 ಕಾಲಪರಿತ್ತ್ರನೆಗೆಸಲುವನಾಂಣ್ಯಪ್ರಿಯಶ್ರಾಹಿಕಂಗು ವರಹ |ಅಕ್ಷಾರದಲ್ಲೂಯಿದೇನಾಂಣ್ಯಕಂಠೀರಾ
17 ಯಗುಳಿಗೆ ವರಹ | ಯಿಾ ವರಹಾಂನ್ನು | ಲಕ್ಷ್ಮೀಕಾಂತ್ತಸ್ವಾಮಿಯವ | ಶೇವಾಧುರ್ರೀಣರಾದ
18 ಭಾರದ್ವಾಜಗೋತ್ರ | ಆಶ್ವಲಾಯನಸೂತ್ರ | ರುಖ್ಶಾಖೆಯ | ಕಳಲೆ ತಿಂಮ್ಮರಾಜವಡೆರಪೌತ್ರರಾದ | ಕ್ರಿಷ್ಣ
19 ಯ್ಯಅರಸಿನವರ ಪುತ್ರರಾದ | ಚೆಲುವೈಯ್ಯಅರಸಿನವರಿಂದ್ದಾ || ನನಿಗೆ ಹಸ್ತ್ತಾಧಸ್ತ್ತವಾಗಿದಿವಾನೊಟ
20 ವಾಗಿ ಸದ್ಯಃ ಪರ್ರಿಚೆದವಾಗಿ | ಕಾಸುವೀಸಉಳಿಯದೆ ಸಾಕಾಲ್ಯವಾಗಿಸಂತ್ತಾದ ಕಾರಣ || ಯಿಲ್ಲಿಂದ್ದಂ
21 ಮುಂದ್ದೆ | ಯಿಾಯೆರಡೂ ಹಾಗೂವೀಸೂಕಾಣಿ ವೃತ್ತಿಗೆಸಲುವಯೆಲ್ಲ ಚತುಸೀಮೆಯೊಳಗಾದ
22 ಗದ್ದೆ ಬೆದ್ದಲುತೋಟತೂಡಿಕೆಅಣೆಅಚ್ಚು ಕಟ್ಟುಕಾಡಾರಂಬ್ಬ ಸೀರಾರಂಬ್ಬ ಮಗ್ಗ ಮನೆಮಣ
23 ಸುಂಕ್ಕ ಸುವರ್ನಾದಾಯ | ಕಾಣಿಕೆಬೆಡಿಗೆಅಗ್ರಹಾರಬ್ರಾಂಹ್ಮಣನಿವೇಶನಶೂದ್ರನಿವೇಶನ |
24 ಹಳಿಹಿರ್ರಿಯೂರನ್ನನಿವೇಶನಂಗ್ಗಳುಮೊದಲಾದ | ಸಕಲಸುವರ್ನಾದಾಯದವಸಾದಾಯ
25 ಮುಂತ್ತಾದ ಆಸಕಲಸ್ವಾಂಮ್ಯಉಸ್ವಾಮಿಯವರಶ್ರೀಭಂಡಾರಕ್ಕೆಸಲೂವದು | ಯಿಲ್ಲಿಂ
26 ದ್ದಂಮುಂದ್ದೆ | ಯಿಾಯೆರಡೂಹಾಗೂವೀಸೂಕಾಣಿವೃತ್ತಿಗೆಸಲುವಯೆಲ್ಲ ಚತುಸ್ಸೀಮೆಯೊ
27 ಳಗುಳನಿಧಿನಿಕ್ಷೆಪಜಲತರುಪಾಷಾಣಅಕ್ಷೀಣಿ ಆಗಾಮಿಸಿದ್ಧ ಸಾಧ್ಯಂಗ್ಗಳೆಂಬ್ಬ ಅಷ್ಟಭೋ
28 ಗತೇಜಸ್ವಾಂಮ್ಯಂಗ್ಗಳುಸ್ವಾಮಿಯವರ ಶ್ರೀಭಂಡಾರಕ್ಕೆ ಸಲುವದುಯೆಂದ್ದುಭಾರದ್ವಾ
29 ಜಗೋತ್ರ ಆಶ್ವಲಾಯನಸೂತ್ರ ರುಖ್ಶಾಖೆ | ಕಳಲೆ ತಿಂಮರಾಜವಡೆರಪೌತ್ರ ಕ್ರಿಷ್ಣಯ್ಯ ಅ
30 ರಸಿನವರ ಪುತ್ರರಾದ | ಚೆಲುವೈಯರಸಿನವರು ಸಮರ್ಪಿಸಿದ ಶ್ಯಾಮೆಯಾಗಿ ಸಲುವದೆಂ
31 ದ್ದು ಕೌಸಿಕಗೋತ್ರ | ಆಪಸ್ತಂಬ್ಬಸೂತ್ರ ಯಜುಶ್ಶಾಖೆ | ಕಂದಾಳಕೇಶವೈಯಂಗಾರಪೌತ್ರ | ಎ
32 ಂಬೆರುಮಾನಾರಪುತ್ರ | ತಿರುಮಲಾಚಾರುಬರಯುಸಿಕೊಟ್ಟೆನಾದಕಾರಣ | ಯಿಲ್ಲಿಂದ್ದಂಮುಂ
33 ದ್ದೆಯಿಾಯೆರಡೂಹಾಗೂವೀಸೂಕಾಣಿವೃತ್ತಿಯನ್ನು | ಸ್ವಾಮಿಯವರಶ್ರೀಭಂಡಾರಕ್ಕೆ ಆ
34 ಚಂದ್ರಾರ್ಕ್ಕವಾಗಿ ಶಾಶ್ವತವಾಗಿವ್ಯವಹಾರ ಚತುಷ್ಟಯಂಗ್ಗಳಿಗೆ ಯೊಗ್ಯವಾಗಿ ಸಲುವದೆ
35 ಂದುಭಾರದ್ವಾಜಗೊತ್ರ ಆಶ್ವಲಾಯನಸೂತ್ರರುಖ್ಶಾಖೆಕಳಲೆತಿಂಮ್ಮರಾಜವಡೇರಪೌ
36 ತ್ರ ಕ್ರಿಷ್ಣಯರಸಿನವರಪುತ್ರ | ಚೆಲುವೈಯ್ಯ ಅರಸಿನವರು || ಸಮರ್ಪಿಸಿದ ಶ್ಯಾಮೆಯಾಗಿ
37 ಸಲುವದೆಂದ್ದುಕೌಸಿಕಗೋತ್ರ ಆಪಸ್ತಂಬಸೂತ್ರ ಯಜುಶ್ಶಾಖೆ | ಕಂದಾಳಕೇಶವೈಯ್ಯಂಗ್ಗಾ
38 ರಪೌತ್ರ | ಯೆಂಬೆರುಮಾನಾರಪುತ್ರತ್ತಿರುಮಲಾಚಾರ್ರು ನಾನು ನಂನ್ನಪುತ್ರಪೌತ್ರಜ್ಞಾತಿ
39 ದಾಯಾದಿಸಾಮಂತಾದ್ಯನುಮತ್ತದಿಂದ್ದ ಸ್ವರೂಚ್ಚಾ ಮೊಪ್ಪಿಮೊಡಂಬಟ್ಟು ಬರಯು
40 ಸಿಕೊಟ್ಟ ವೃತ್ತಿಗಳ ಕ್ರಯದಾನಸಾಧನಾ | ಯಿಂತಪ್ಪುದಕ್ಕೆ ಸಾಕ್ಷಿಗಳು |

(ಇಲ್ಲಿ ಮೂಲಪ್ರತಿಯಲ್ಲಿ ಸ್ಥಳ ಬಿಟ್ಟಿರುತ್ತದೆ.)

41 ಉಭಯಾನುಮತದಿಂದಬರದಾತ ಅರಮನೆ ಸಮುಖದವಿದ್ವಾಂಸವೀಣೆವೆಂಕ್ಕಟರಾಮೈನಮಗವೆಂ
42 ಕ್ಕಟಾಚಾರ ಬರಹಾ || (ಗ್ರಂಥಾಕ್ಷರದಲ್ಲಿ) ಶ್ರೀಗೋಪಾಲ ||
43 ದಾನಪಾಲನಯೋರ್ಮಧ್ಯೇ | ದಾನಾಚ್ಛ್ರೇಯೋನುಪಾಲನಂದಾನಾತ್ಸ್ವರ್ಗ್ಗಮವಾಪ್ನೋತಿ | ಪಾಲನಾದಚ್ಯುತ್ತಂಪದಂ ||

## 297

ಹುಲ್ಲಹಳ್ಳಿ ಹೋಬಳಿ ಹೆಡಿಯಾಲ ಗ್ರಾಮದಲ್ಲಿ ಪಟೇಲ್ ಚಿಕ್ಕಲಿಂಗಪ್ಪನ ಹೊಲದಲ್ಲಿ ನಿಂತಿರುವ ಕಲ್ಲು.

ಪ್ರಮಾಣ—6′ × 2′3″

1 ಸ್ವಸ್ತಿಶ್ರೀಜಯಾಭ್ಯುದಯಶಾಲಿವಾಹನಶಕವರುಷ | 2 ೧೬೧೬ಸಂದುವರ್ತ್ತಮಾನಭಾವಸಂವತ್ಸರದಕಾರ್ತ್ತಿ

3 ಕಶುಕ್ಷಲೂಸುತ್ತೂರಸಿಂಹಾಸನದ ಪರ್ವತ ಒಡೆಯರ
4 ಶಿಷ್ಯರು ಭಂಡಾರಿಬಸವಪ್ಪಒಡೆಯರುನಂಜೆಲುಗೂ
5 ಡು ಕಪಿಲಾಕಭಂಡಿನೀಸಂಗಮಪತೆಂಕಣತಡಿಯಲ್ಲಿ
6 ತಾವುನೂತನಪ್ರತಿಷ್ಟೆಯಾಗಿ ಮಾಡಿದ ಸಂಗಮೇಶ್ವರ
7 ದೇವರ ಶ್ರೀಕಾರ್ಯಕ್ಕು ಅಲ್ಲಿಗ್ರಾಸವಾಗಿಯಿಹಸಿರಿ
8 ಗಿದೇವ ಒಡೆಯರು ದೇವರಿಗೂ ಅವರಕೂಡಸಹ
9 ವಾಸವಾಗಿಯಿಹಹಿರಿಯರುಗಳಿಗೂಅವರನಯಿವೇ
10 ದ್ಯವಲ | ಪಚಸಿತಪರಿಹರಗಳುನಡಪಿದಕೆ ಕೊಟ್ಟ ಗ್ರಾ
11 ಮಯೆತ್ತುಗದಮುಳೂರಹೆಡೆಯಾಲಸ್ಥಳದಲ್ಲಿ
12 ಆಮುಳೂರಪ್ರಭುವಿರುಪಂಣಯೊಡಯರಮಕ್ಕಳುನಂ
13 ಜೆನಾತಬಂದಿಯಪ್ಪ ಚಿಕ್ಕನಂಜಯ್ಯನವರು ನಂಮಕಯ್ಯ
14 ವಿಕ್ರಯವನುತೆಗೆದುಕೊಂಡು ಆ ಗ್ರಾಮದ ಚತುಸೀಮೆ
15 ಗೆ ಲಿಂಗಮುದ್ರೆಯಕಲ್ಲನುನಟ್ಟಕೊಟ್ಟು ನಮಗೆ ಸರ್ವಮಾ
16 ನ್ಯವಾಗಿ ಕೊಡಗಿಯಾಗಿನಡಸಿಬಹ.ಚಿಲ್ಲಹಳ್ಳಿ
17 ಯಗ್ರಾಮ ಒಂದನೂ ಅದಕೆ ಸಲುವಸರ್ವಸ್ವಾಮ್ಯಸಹವಾ
18 ಗಿ ಆ ಸಂಗಮೇಶ್ವರದೇವರಿಗೂ ಅಲ್ಲಿವಾಸವಾಗಿಯಿಹಸಿರಿ
19 ಗಿರಿದೇವ ಒಡೆಯರುದೇವರಿಗೂ ಸಮಭಾಗಿಯಾಗಿ ಆಚಿ
20 ಲಹಳ್ಳಿಯ ಗ್ರಾಮ ಒಂದನು ಸಮರ್ಪಿಸಿದೆವುಯೆಂದು ಬ
21 ರಸಿದ ಧರ್ಮಸಾಶನಯಿಾಗ್ರಾಮವನೂ ಆಮುಳೂರ ಪ್ರಭು
22 ಗಳು ನಂಜೆನಾಥಬಂದಿಯಪ್ಪ ಚಿಕ್ಕನಂಜಯ್ಯನವರು
23 ತಂಮಿಂದಮತಾರಿಂದಲುವುಪಹತಿಬಾರದಹಾಗೆ ತಾವು
24 ಕೊಟ್ಟಂತಹ ದರ್ಮವುತಂಮ ಮಂಸಪಾರಂಪಾರಿಯಾಗಿ
25 ಆಚಂದ್ರಾರ್ಕ್ಕಸ್ಥಾಯಿಯಾಗಿ ಸರ್ವ್ವಮಾಂನ್ಯವಾಗಿ ನ
26 ಡಸಿಬಹರುಯಿದಕ್ಕೆ ತಪ್ಪಿದವರು ವಾರಣಾಸಿಯಲ್ಲಿ
27 ಗೋವನೂ ಬ್ರಾಂಹ್ಮಣರನೂ ಕೊಂದಪಾಪಕ್ಕೆ ಹೋಹ
28 ರೂ || ಸ್ವದತ್ತಾಂಪರದತ್ತಾಂ ವಾಯೋಹರೇತವಸುಂಧರಾ
29 ಷಷ್ಟಿರ್ವ್ವರುಷಸಹಸ್ರಾಣಿ ವಿಷ್ಟಾಯಂಜಾಯ
30 ತೇಕ್ರಿಮಿಃ ||

## 298

ಹೆಡತಲೆ ಹೋಬಳಿ ಗಟ್ಟವಾಡಿ ಗ್ರಾಮದಲ್ಲಿರುವ ಗುರುಕಾರ ಸುಬ್ಬಣ್ಣನ ವಶದಲ್ಲಿರುವ 1ನೆಯ ತಾಮ್ರಶಾಸನ.

1 ಶುಭಮಸ್ತು || ಹರೇರ್ಲೀಲಾವರಾಹಸ್ಯದಂಷ್ಟ್ರಾದಂಡಃ ಸಪಾತುವಃ
2 ಹೇಮಾದ್ರಿಕಲಶಾಯತ್ರಧಾತ್ರೀಛತ್ರಶ್ರಿಯಂದಧೌ || ನಮಸ್ತುಂಗಶಿ
3 ರಶ್ಚುಂಬಿಚಂದ್ರಚಾಮರಚಾರವೇ | ತ್ರೈಲೋಕ್ಯನಗರಾರಂಭಮೂ
4 ಲಸ್ತಂಭಾಯಶಂಭವೇ || ಸ್ವಸ್ತಿಶ್ರೀ ವಿಜಯಾಭ್ಯುದಯಶಾಲಿವಾಹ
5 ನ ಶಕವರ್ಷಂಗಳು ೧೬೮೩ ಸಂದವರ್ತಮಾನವಾದ ವಿಷುಸಂವತ್ಸರದ
6 ಮಾರ್ಗಶಿರ ಶು೧೦ಲೂ ಶ್ರೀಮದ್ರಾಜಾಧಿರಾಜರಾಜಪರಮೇಶ್ವರ ಪ್ರೌಢಪ್ರತಾ
7 ಪಾಪ್ರತಿಮವೀರನರಪತಿ ಮಹೀಶೂರ ಶ್ರೀಕೃಷ್ಣರಾಜಒಡೆಯರೈಯ
8 ನವರುವೆಂಕಟರಾಮಯ್ಯಗೆಬರೆಸಿಕೊಟ್ಟ ಕ್ರಯ ಭೂದಾನ ತಾಂಮ್ರದ ಶಾಸ
9 ನದ ಕ್ರಮವೆಂತೆಂದರೆ | ಪಟಣದ ಹೋಬಳೀ ಸೀಮೆವಿಚಾರದ ಚಾವಡಿ

10 ವಳಿತದ ತುರುವೆಕೆರೆಸ್ಥಳದ ಮುಃಖಾಸಿ ಚಿಕ್ಕಡೊಂಕಿಹಳಿಗ್ರಾಮ
11 ಕೆರೆ ೧ ಅಣೆ ೧ ಉಪಗ್ರಾಮ ಕನಕಪುರದ ಗ್ರಾಮ ೧ ಗೊಲ್ಲರಹ
12 ಟ್ಟಿ ಗ್ರಾಮ ೧ ಪಂನಾಳಿಕೊಪ್ಪಲು ೧ ಸಹಸ್ಥಳದ ಶ್ಯಾನಭಾಗಪರಮೇ
13 ಶ್ವರೈನ ಲೆಖ್ಖ ಪ್ರಕಾರ ಬಹುಧಾಂನ್ಯ ಸಂವತ್ಸರಕ್ಕೆ ಹುಟ್ಟುವಳಿ ಸಕಲಸು
14 ವರ್ನಾದಾಯದೆವಸಾದಾಯಸಹಕಂಗು ೧೪೪೮೪ ಲಿಂಗದಮಣಿ
15 ಹ್ಯ ಸುಂಕ್ಕಗು ೪೮೩ ಪೊಂಮುಗು ೮೪ ಉಂತ್ತಾಗು ೧೪೪೮೧ ನೂರ
16 ನಾಲ್ವತ್ತನಾಲ್ಕು ವರಹಾವು ಆರು ಹಣದ ಹುಟ್ಟುವಳಿ ಗ್ರಾಮಗಳಂ
17 ನ್ನು ಕ್ರಯ ಭೂದಾನವಾಗಿ ಅಪ್ಪಣೆ ಕೊಡಿಸಬೇಕೆಂದು ನೀನು ಹೇಳಿ
18 ಕೊಂಡು ಯಿದಕ್ಕ ಸಲೂಕ್ರಯಕ್ಕಂಗು ೧೪೪೬೦ ಸಾವಿರದ
19 ನಾನೂರ ನಾಲ್ವತ್ತಾರುವರಹವುವರ್ತಕಕೊಳಾಗಾಲದ
20 ವೀರಶಟ್ಟಿ ಮುಃಖಾತ್ರ ಬೊಕ್ಕಸಕ್ಕೆ ಸಾಕಲ್ಯವಾಗಿ ಪಪ್ಪಿ
21 ಸ್ತಿಯಾದ ಕಾರಣ ಆಮೇರೆಗೆ ತುರುವೆಕೆರೆ ಸ್ಥಳದ ಮು
22 ಖಾಸಿಚಿಕ್ಕಡೊಂಕಿಹಳ್ಳಿ ಗ್ರಾಮ ೧ ಕೆರೆ ೧ ಅಣೆ ೧ ಉ
23 ಪಗ್ರಾಮಗಳು ಸಹಾ ನಿನಗೆ ಕ್ರಯಭೂದಾನವಾಗಿ ಕೊ
24 ಡಿಸಿಥೆಮೆಯಾದಕುರಿತು ಆಮೇರಿಗೆ । ಈ ಗ್ರಾಮಗಳ
25 ಯಲ್ಲಿ ಚತುಸ್ಸೀಮೆಯೊಳಗುಳ್ಳ ನಿಧ್ಯಾದ್ಯಷ್ಟಭೋಗತೇ
26 ಜಃಸ್ವಾಮ್ಯಂಗಳು ನಿನಿಗೆ ಸಲುವುದು । ಯಿಲ್ಲಿಂದಂಮುಂ
27 ದೆ ನೀನು ಮಾಡುವ ಅಧಿಕ್ರಯದಾನ ಪರಿವರ್ತನೆಗಳಿಂ
28 ಬ ವ್ಯವಹಾರ ಚತುಷ್ಟಯಂಗಳಿಗು ಸಲುವದಾದಕಾರ
29 ಣ ಪುತ್ರ ಪೌತ್ರಪಾರಂಪರ್ಯವಾಗಿ ನಿರುಪಾಧಿಕ ಸರ್ವ
30 ಮಾಂನ್ಯವಾಗಿ ಅನುಭವಿಸಿಕೊಂಡು ಬರುವುದು । ಏಕೈ
31 ವಭಗಿನೀಲೋಕೇಸರ್ವೇಷಾಮೇವಭೂಭುಜಾಂ । ನಭೋಜ್ಯಾ
32 ನಕರಗ್ರಾಹ್ಯಾವಿಪ್ರದತ್ತಾವಸುಂಧರಾ । ಸ್ವದತ್ತಾಂಪರದ
33 ತ್ತಾಂವಾ ಯೋಹರೇತಿ ವಸುಂಧರಾ । ಷಷ್ಟಿರ್ವರ್ಷ ಸ
34 ಹಸ್ರಾಣಿ ವಿಷ್ಠಾಯಾಂ ಜಾಯತೇಕ್ರಿಮಿಃ । ಶ್ರೀಕೃಷ್ಣ
35 ರಾಜ

## 299

### ಅದೇ ಸುಬ್ಬಣ್ಣನ ವಶದಲ್ಲಿರುವ 2ನೆಯ ತಾಮ್ರಶಾಸನ.

1 ಶುಭಮಸ್ತು । ಹರೇರ್ಲೀಲಾವರಾಹಸ್ಯದಂಷ್ಟ್ರಾದಂಡಸ್ಸಪಾತುವಃ । ಹೇ
2 ಮಾದ್ರಿಕಲಶಾಯತ್ರಧಾತ್ರೀಛತ್ರ ಶ್ರಿಯಂದಧೌ । ನಮಸ್ತುಂಗಶಿರ
3 ಶ್ಚುಂಬಿಚಂದ್ರಚಾಮರ ಚಾರವೇ । ತ್ರೈಲೋಕ್ಯನಗರಾರಂಭಮೂಲ
4 ಸ್ತಂಭಾಯಶಂಭವೇ ॥ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾ
5 ಹನ ಶಕವರ್ಷಂಗಳು ೧೭೪೦ ಸಂದವರ್ತಮಾನವಾದ ವಿಷು ಸಂ
6 ವತ್ಸರದ ಮಾಘ ಶು ೩ಲ್ಲು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರಾಪ್ರ
7 ತಿಮ ಪ್ರೌಢಪ್ರತಾಪ ವೀರನರಪತಿ ಮಹಿಶೂರ ಶ್ರೀಕೃಷ್ಣರಾಜವಡೆಯ
8 ರೈಯನವರು ವೆಂಕಟರಾಮೈಗೆ ಬರೆಸಿಕೊಟ್ಟ ಕ್ರಯ ಭೂದಾನತಾಂ
9 ಮ್ರ ಶಾಸನದ ಕ್ರಮವೆಂತೆಂದರೆ । ಮಹಿಶೂರ ನಗರದ ಹೋಬಳಿ ವಿ
10 ಚಾರದ ಚಾವಡೀವಳಿತದ ತಾಯೂರು ಸ್ಥಳದ ಕಾಮಹಳ್ಳಿ ಗ್ರಾಮ
11 ೧ಕ್ಕೆ ಸ್ಥಳದ ಶಾನಭಾಗ ಸೀತಾರಾಮೈನ । ಲೆಖಪ್ರಕಾರ ಬಹುಧಾನ್ಯ

ಸಂವತ್ಸರಕ್ಕೆ ಹುಟ್ಟಿದ್ದು ಸುವರ್ನಾದಾಯದವಸದಾಯಸಹ
ಕಂಗು ೨೦೮೩ | ೩ ಲಿಂಗದಮಣಿಹಸುಂಕಪೊಂಮುಗು ೯ ೪ ೯ ೩ ಉಭ
ಯಂಕಂಗು ೨೧೩ ಇಪ್ಪತ್ತೊಂದು ವರಹಉ ಮೂರುಹಣದ ಹುಟ್ಟ
ವಳಿ ಗ್ರಾಮವನ್ನು ಕ್ರಯಭೂದಾನವಾಗಿ ಅಪ್ಪಣೆಕೊಡಿಸಬೇಕೆಂ
ದು ನೀನು ಹೇಳಿಕೊಂಡು ಯಿದಕ್ಕೆ ಸಲೂಕ್ರಯಕಂಗು ೨೧೩ ೯೦ಯಿಂ
ನೂರಹದಿಮೂರು ವರಹನ್ನುಸಾಕಲ್ಯವಾಗಿ ಕೊಳ್ಳಗಾಲದ ವೀ
ರಶೆಟ್ಟಿ ಮುಖಾಂತ್ರ ಬೊಕ್ಕಸಕ್ಕೆ ಒಪ್ಪಿಸ್ತೆಯಾದಕಾರಣ ಯಿಗ್ರಾ
ಮವನ್ನು ನಿನಗೆ ಕ್ರಯ ಭೂದಾನವಾಗಿ ಕೊಡಿಸಿಯಿರುವದಕುರಿತು
ಆಮೇರಗೆ ಈ ಕಾಮಹಳ್ಳಿ ಗ್ರಾಮದಯೆಲ್ಲೆ ಚತುಃಸೀಮೆಯೊಳ
ಗುಳ್ಳ ನಿಧ್ಯಾದ್ಯಷ್ಟಭೋಗತೇಜ ಸ್ವಾಮ್ಯಂಗಳು ನಿನಗೆ ಸಲುವದು | ಮುಂ
ದೆ ನೀನು ಮಾಡುವ ಆಧಿಕ್ರಯದಾನ ಪರಿವರ್ತನಗಳಿಗೂ ಸಲೂದಾ
ದ ಕಾರಣ ಪುತ್ರಪೌತ್ರಪಾರಂಪರ್ಯವಾಗಿ ನಿರುಪಾಧಿಕ ಸರ್ವಮಾ
ನ್ಯವಾಗಿ ಶಾಶ್ವತವಾಗಿ ಅನುಭವಿಸಿಕೊಂಡು ಬರುವದು | ಯೇಕೈ
ವ ಭಗಿನೀಲೋಕೇ ಸರ್ವೇಷಾಮೇವ ಭೂಭುಜಾಂ | ನಭೋಜ್ಯಾ
ನಕರಗ್ರಾಹ್ಯಾ ವಿಪ್ರದತ್ತಾವಸುಂಧರಾ | ಸ್ವದತ್ತಾಂಪರದತ್ತಾಂವಾಯೋಹರೇ
ತವಸುಂಧರಾಂ | ಷಷ್ಟಿರ್ವರ್ಷಸಹಸ್ರಾಣಿ ವಿಷ್ಟಾಯಾಂಜಾಯ
ತೇಕ್ರಿಮಿಃ | ಶ್ರೀಕೃಷ್ಣರಾಜ |

## 300

### ಅದೇ ಸುಬ್ಬಣ್ಣನವಶದಲ್ಲಿರುವ 3ನೆಯ ತಾಮ್ರಶಾಸನ.

ಶುಭಮಸ್ತು | ಹರೇರ್ಲೀಲಾವರಾಹಸ್ಯದಂಷ್ಟ್ರಾದಂಡಸಪಾತು
ವಃ | ಹೇಮಾದ್ರಿಕಲಶಾಯತ್ರಧಾತ್ರೀಛತ್ರಶ್ರಿಯಂದಧೌ || ನಮ
ಸ್ತುಂಗಶಿರಶ್ಚುಂಬಿ ಚಂದ್ರಚಾಮರ ಚಾರವೇ | ತ್ರೈಲೋಕ್ಯನಗ
ರಾರಂಭ ಮೂಲಸ್ತಂಭಾಯಶಂಭವೇ || ಸ್ವಸ್ತಿಶ್ರೀವಿಜಯಾ
ಭ್ಯುದಯಶಾಲಿವಾಹನಶಕ ವರ್ಷಂಗಳು ೧೬೮೩ಸಂದವರ್ತ
ಮಾನವಾದ ವಿಷು ಸಂವತ್ಸರದ ಆಶ್ವೀಜ ಬ ೧೨ ಲ್ಲು ಶ್ರೀಮದ್ರಾಜಾ
ಧಿರಾಜ ರಾಜಪರಮೇಶ್ವರಾಪ್ರತಿಮ ಪ್ರೌಢಪ್ರತಾಪ ವೀರನರಪತಿ
ಮಹಿಸೂರ ಶ್ರೀ ಕೃಷ್ಣರಾಜ ವಡೆಯರೈಯನವರು ಸೀತಾರಾ
ಮ ಸೋಮಯಾಜಿ ರಂಗುಭಟ್ಟನಿಗೆ ಸಹ ಬರೆಸಿಕೊಟ್ಟ ಕ್ರ
ಯಭೂದಾನತಾಮ್ರಶಾಸನದ ಕ್ರಮವೆಂತೆಂದರೆ | ಮಹೀ
ಶೂರನಗರದ ಹೋಬಳಿ ವಿಚಾರದ ಚಾವಡಿ ವಳಿತದತಾ
ಯೂರಸ್ಥಳದಚಿಕ್ಕಟಿ ಗ್ರಾಮ ೧ ಕೆರೆ ೧ ಸಹವಿಚಾರದ
ಚಾವಡಿ ಶಾನಭಾಗೆ ಹುಡಾಸ್ಯೆ ಬರದುಕೊಂಡು ಬಂ
ದಲೆಖಪ್ರಕಾರ ಬಹುಧಾನ್ಯ ಸಂವತ್ಸರಕ್ಕೆ ಹುಟ್ಟಿದ ಸು
ವರ್ನಾದಾಯದವಸಾದಾಯ ಸಹಗೌ ೧೧೨ ೯ ೩ ಲಿಂಗದ
ಮಣಿಹಸುಂಕ್ಕಗು ೯ ೧ ಪೊಂಮುಗು ೩೯ ೧ ಅಂತು ಗ್ರಾ
ಮ ೧ಕ್ಕೆ ಹುಟ್ಟಿದ್ದು ಕಂಗು ೧೨೮ ೯೦ ನೂರಿಪ್ಪತ್ತೆಂಟು ವರಹ
ದ ಹುಟ್ಟುವಳಿಗ್ರಾಮವಂನ ನಿಮಗೆ ಕ್ರಯ ಭೂದಾನವಾ
ಗಿ ಕೊಡಿಸಿಯಿದ್ಧೇವೆಯಾದಕಾರಣ ಯಿದಕ್ಕೆ ಸಲೂಕ್ರಯ
ಕಂಗು ೧೨೮೯೦ ಸಾವಿರದಯೆಂನೂರೆಂಭತ್ತು ವರಹಉಸಾ

ಕಲ್ಯವಾಗಿ ವರ್ತಕ ನರಸಿಂಹದಾಸೂಮುಂಖಾಂತ್ರ ಚೊಕ್ಕಸ
ಕ್ಕೆ ಸಂತಾದ್ದರಿಂದ ಗ್ರಾಮದಯಲ್ಲಿ ಚತುಸ್ಸೀಮೆಯೊ
ಳಗುಳ್ಳನಿಧ್ಯಾದ್ಯಷ್ಟಭೋಗತೇಜಸ್ವಾಮ್ಯಂಗಳು ನಿಮ್ಮಿ
ಗ ಸಲುವದು | ಯಿಲ್ಲಿಂದಂಮುಂದೆ ನೀವು ಮಾಡುವ ಆಧಿ
ಕ್ರಯದಾನ ಪರಿವರ್ತನೆಗಳೆಂಬ ವ್ಯವಹಾರ ಚತು
ಷ್ಟಯಂಗಳಿಗೂ ಸಲೂದಾದ್ದಕುತರ್ೂ ಪುತ್ರ ಪೌತ್ರಪಾ
ರಂಪರ್ಯವಾಗಿ ನಿರುಪಾಧಿಕ ಸರ್ವಮಾನ್ಯವಾಗಿ ಶಾಶ್ವತವಾ
ಗಿ ಅನುಭವಿಸಿಕೊಂಡುಬರುವದು | ಯೇಕೈವಭಗಿನೀಲೋ
ಕೇಸರ್ವೇಷಾಮೇವ ಭೂಭುಜಾಂ | ನ ಭೋಜ್ಯಾನಕರಗ್ರಾ
ಹ್ಯಾ ವಿಪ್ರದತ್ತಾವಸುಂಧರಾ | ಸ್ವದತ್ತಾಂಪರದತ್ತಾಂವಾ
ಯೋಹರೇತಿವಸುಂಧರಾಂ | ಷಷ್ಟಿರ್ವರ್ಷಸಹಸ್ರಾಣಿ
ವಿಷ್ಠಾಯಾಂ ಜಾಯತೇ ಕ್ರಿಮಿಃ ‖ ಶ್ರೀಕೃಷ್ಣ
ರಾಜ





## Seringapatam Taluk.

## ಶ್ರೀರಂಗಪಟ್ಟಣ ತಾಲ್ಲೂಕು.

---

### REVISED INSCRIPTIONS.

### ತಿದ್ದುಪಾಡಾದ ಶಾಸನಗಳು.

## 2

ಶ್ರೀರಂಗಪಟ್ಟಣದಲ್ಲಿ ಶ್ರೀರಂಗನಾಥ ದೇವಸ್ಥಾನದ ಒಳಪ್ರಾಕಾರದ ಉತ್ತರಗೋಡೆ ಕಲ್ಲಮೇಲೆ.

1 ಶುಭಮಸ್ತು || ಶಾಕೇಬ್ದೇಷುಪಯೋಧಿಭೂಪರಿಮಿತೇ ಶ್ರೀಸರ್ವಧಾರ್ಯಾಹ್ವಯೇ ವರ್ಷೇ ಸಂಪುಟಭಾಗಭೂಪತಿರಸಾವಾ
ತ್ರೇಯಗೋತ್ರೋದಯಃ | ಶ್ರೀಮತ್ಪಶ್ಚಿಮರಂ [ಗ] ನಾಥಮಹಿಷೀ ಲಕ್ಷ್ಮೀಮುದೇ ದೇವತಾ ಗ್ರಾಮಂಮಾನ್ಯ .

2 ನಾಗಮಾರ್ಜಿತಮದಾತ್ತಿಂಮಕ್ಷಿತೀಂದ್ರಾತ್ಮಜಃ || ಪಾಯಾತ್‌ಪನ್ನಗಶಾಯಿಪಶ್ಚಿಮರಂಗೇಶಃ ಪುಮಾನೇಷಃ | ಪತ್ಮಾವ
ಸುಂಧರಾಭ್ಯಾಂಮಾಕಲ್ಪಂ ಭೋಗರಾಜವರತಲ್ಪಃ || ಸ್ಫಾರಪ್ರತಾಪವಿದಿಟಿತ ಲೋಕಾಲೋಕಾಂತಸೀ

3 ಮ್ನಿಶುಭಯಶಸಿ | ಶ್ರೀಕೃಷ್ಣರಾಯಭೂಭುಜೇಶಾಸತಿ ಪೃಥ್ವೀಂಸಮಗ್ರಬಲನಿಲಯೇ || ಶುಭಮಸ್ತು | ಶಾಲಿವಾಹನಶಕ
ವರ್ಷೇ ಖೇಷುವೇದಶಿಸಂಖ್ಯೇ | ವರ್ಷೇಥಸರ್ವಧಾರಿಣಿ ಪುಣ್ಯಾತಮಾಯಾಂ ಕುಳೀರ ಸಂಕ್ರಾಂತೌ | ಆಷಾಢೇಶು

4 ಕ್ಲಪಕ್ಷೇಶಿತರೋಚಿಷೋವಾರೇ | ಧರಣೀವರಾಹಬಿರುದಾಭರಣೋ ಭೂಪಾಲವರ್ಯ್ಯಮೌಳಿಮಣಿಃ || ಶಶಿವಂಶತಿಲಕ
ತಿಂಮಕ್ಷಿತಿಪತಿನಾಗಲಾಂಬಿಕಾತನಯಃ | ಧರ್ಮಾವಲಂಬಿಭೂತೋಧರಣೀಸುರಪೋಷಣೈಕ

5 ದೀಕ್ಷಾಪರ್ | ಆತ್ರೇಯಗೋತ್ರಭೂಷಣಮತುಲಯಶಃಪೂರಧವಳಿತದಿಗಂತಃ | ಮಂನೆಯಗಜಪತಿಬಿರುದೋಮಂನೆಯಶಾ
ರ್ದೂಲಬಿರುದವರಭೂಷಃ || ಉ . . . ಣ . . . ಲ ಸುರದಾಣಾಭಿಮಳಾಬಿರುದಶ್ರೀ

6 ಭೋಗರಾಜಭೂಪಾಲಃ | ಶ್ರೀದೇವನೂರ್ಸಮಾಹ್ವಂಪ್ರತಿನಾಮ್ನಾನಾಗಲಾಪುರಂಚೇತಿ || ಶಿಲಾ . . ಪ್ರಸಿದ್ಧಸೀಮಾಸ
ಮನ್ವಿತಂ . . . . . . . . ನಮುನಾಃಪಶ್ಚಿಮರಂಗೇಶಿನಾ . . ಪ್ರೀತ್ಯೈನಿತ್ಯಮ

7 ಹಾನ್ನೈವೇದ್ಯಪ್ರಸಾದಕ್ಕೆಶಾಲಿತಂಡುಲಾನೆಸುಶರದಂಮಭಕ್ಷ್ಯ . ಸುಪ್ರಸಾದಭೂತಂಚತುರ್ಥಭಾಗಮ್ಯಸಾ || ಪಾದೋನಭ
ಕ್ಷ್ಯಂನವಕಂ . . . . . ಸಂಭಾವ್ಯಮಾಕಲಂ | ಪಾದ್ರಾನ್ನಾದ್ಯಸುದರ್ಶನವರದಾಖ್ಯಾ

8 ರ್ಯಾಯಗಾರ್ಗ್ಯಗೋತ್ರಾಯ || ಸ್ವಸ್ತಿಶ್ರೀಜಯಾಭ್ಯುದಯ ಶಾಲೀವಾಹನಶಕವರ್ಷ೧೪೫೦ಸಂದವರ್ತಮಾನವಾದಸರ್ವ
ಧಾರಿಸಂವತ್ಸರದ ಆಷಾಢ ಶುದ್ಧ ೧೦ ಸೋಮವಾರ ಕರ್ಕಟಕ ಸಂಕ್ರಾಂತಿಪುಣ್ಯಕಾಲದಲ್ಲಿ ಶ್ರೀಮಂ

9 ನ್ಮಹಾರಾಜಾಧಿರಾಜರಾಜಪರಮೇಶ್ವರಶ್ರೀವೀರಪ್ರತಾಪಶ್ರೀವೀರಕೃಷ್ಣರಾಯಮಹಾರಾಯರುಪೃಥ್ವೀರಾಜ್ಯಂಗೈಉತ್ತಿರ
ಲುಶ್ರೀಮದುಭಯಕಾವೇರೀಮಧ್ಯದಲುಳಗೌತಮಕ್ಷೇತ್ರವಾದಶ್ರೀಪಶ್ಚಿಮರಂಗಕ್ಷೇತ್ರದಲ್ಲಿ ನಿತ್ಯಕೃತುಸಾನ್ನಿ

10 ಧ್ಯರಾದಸಮಸ್ತಜಗದೇಕನಾಯಕಶ್ರೀರಂಗನಾಥದೇವರದಿವ್ಯಶ್ರೀಚರಣಾರವಿಂದಸನ್ನಿಧಿಯಲ್ಲಿಸಕಲಭುವನೈಕನಾಯಕಿಯಾ
ದಸರ್ವಾಂತರ್ಯಾಮಿಶ್ರೀರಂಗನಾಥದೇವರದಿವ್ಯಮಹಿಷಿಯಾದಶ್ರೀರಂಗನಾಯಕಿದೇವಿಯಶ್ರೀ

11 ಚರಣಾರವಿಂದಯುಗಳಕ್ಕೆಶ್ರೀಮನ್ಮಹಾಮಂಡಲೇಶ್ವರ ಅರಿವೆಂಟಕಳೂರಕೆಯಿಯಗಜಪತಿಉರುಳಗೋತ್ರಸುರದಾಣಧರ
ಣೀವರಾಹಮಂಚಿಯಶಾರ್ದೂಲಚಮಟಿಯಂಬಿಉಮೊದಲಾದಬಿರಿದಾವಳಿಭೂಷಿತರಾದಸೋಮವಂ

12 ಶಾಭರಣರಾದಆತ್ರೇಯಗೋತ್ರದಚೆಂಮಟಿತಿಂಮರಾಜಭೂವೀರ . . ರಾದಸಕಲವಿದ್ಯಾವಿಶಾರದರಾದಪ್ರಜಾಪಾಲನಾದಿಧರ್ಮ
ಪರಾಯಣರಾದಭೋಗಯದೇವಮಹಾಅರಸರವರು . . . . . ಭಕ್ತಕಾರಿತನಿತ್ಯಕೈಂಕರ್ಯ್ಯಕ್ಕೆಮತ್ತೂರದಸಮಂ

13 ದಕ್ಕಮರ್ಪಿಸಿದಗ್ರಾಮದಧರ್ಮಶಾಸನದಕ್ರಮವೆಂತೆಂದರೆ ನಮಗೆನಾಯಕತನಕ್ಕೆಸಲುವಶ್ರೀರಂಗಪಟ್ಟಣದಸೀಮೆಯೊಳಗಣ
ಗುಮ್ಮನಪೃತ್ತಿಯಸ್ಥಳದದೇವಪುರಿಯೆಂಬಗ್ರಾಮವನುಕೃಷ್ಣರಾಯನಾಯಕರಅನುಮತ . . . . .

14 ಮಮಾರಾಯಗಳುನಾಗಾಂಬಾಅಮ್ಮನವರ ಹೆಸರಿನಲ್ಲಿನಾಗಲಾಪುರವೆಂಬಪ್ರತಿನಾಮವನುಮಾಡಿಈಗ್ರಾಮವನುಸರ್ವಲೋಕ
ಜನನಿಯಾದಶ್ರೀರಂಗನಾಯಕಿದೇವಿಯರದಿವ್ಯಲೀಲಾವಿಲಾಸಕ್ಕೆಇದಂಪ್ರಥಮವಾಗಿಕಲ್ಪಿಸಿ

15 ಪ್ರತಿವರ್ಷಉನಡೆಮಬರು . . . . . . . . . . ನಿಕಾಹನಿತ್ಯನೈವೇದ್ಯಕರ್ಪೂರಾಯನಂದಾದೀಪಇವಕ್ಕೆಶಲವಾಗಿಈನಾ
ಗಲಾಪುರವೆಂಬಗ್ರಾಮವನುಸಹಿರಣ್ಯೋದಕದಾನಧಾರಾಪೂರ್ವಕವಾಗಿಆಲ




16 ಕ್ಷ್ಮೀದೇವಿಯರ ಶ್ರೀಪಾದಪದ್ಮಂಗಳಿಗೆ ಸ[ಮ]ರ್ಪಿಸಿದೆವಾಗಿ ಈಗ್ರಾಮದಲ್ಲಿಹುಟ್ಟುವತೊಂಭತ್ತು ವರಹಗೆಸೇವೆನಡವವಿವರ ರಥೋತ್ಸವಕ್ಕೆನಾಲ್ವತ್ತು ವರಹಪ್ರತಿಶುಕ್ರವಾರಉಪಚ್ಛ ಕರ್ಪೂರಕಸ್ತೂರಿಸಹಿತವಾದತೆ . .

17 ಪುಣಗಿನಕಾಪಿಗೆಶುಕ್ರವಾರಬಂದಕ್ಕೆನಾಲ್ಕು ಹಣಉಹೂಗಡಲೆಕದಲು ವರ್ಷವೊಂದಕ್ಕೆ ಇಪ್ಪತ್ತು ವರಹಾನೂನಾಲ್ಕು ಹಣಪ್ರತಿ ದಿನಉನಡೆವನಿತ್ಯನೈವೇದ್ಯಕ್ಕೆ ಶ್ರೀರಂಗನಾಥದೇವರತಳಿಗೆಬಂದುಶ್ರೀ

18 ಲಕ್ಷ್ಮೀದೇವಿಯಹರಿವಾಣಬಂದುಉಭಯಂಹರಿವಾಣಯ್ಯರಡಕ್ಕೆ ಅಕ್ಕಿ ಇಕ್ಕುಳಪರುಪುಪದಾರ್ಥತುಪ್ಪ . . . . ಕವುಲಿಯು ಬಗೆಜೇರಿಗೆ . . . . . . . . . .

19 ಯಿಪ್ರಕಾರದಲ್ಲಿಶ್ರೀರಂಗನಾಥದೇವರುಶ್ರೀಲಕ್ಷ್ಮೀಅಂಮನವರುಪ್ರತಿದಿನಉಆರೋಗಣೆಯುಬಿನ್ನೈಶಿಬನ . . . ಅಕ್ಕಿಯುಹರಿ ವಾಣಪ್ರಸಾದ . . . . . . . . . . . . . . . . ಸ

20 ಉವಂತಾ . . ಅಂಶದಯುರಡುಬಳ್ಳಆಕ್ಕಿಯುತಳಿಗೆಪ್ರಸಾದಎಂಟೂಮುಪ್ಪಾಗಕರುಯುಇಷ್ಟನೂಗರ್ಗಗೋತ್ರದಆಪಸ್ತಂ. ಬಸೂತ್ರದ . . . . . . . ಪ್ರತಿಷ್ಠಾಚಾರ್ಯ್ಯ

21 ರಾಮಸುದರ್ಶನವರದಾಚಾರ್ಯ್ಯ . . . . . ರಾಮಪರಂಗಡಿರಾಜಯ್ಯನವರ ಮಕ್ಕಳುವರದರಾಜಯ್ಯನವರಿಗೆಧಾರಾಪೂರ್ವ ಕವಾಗಿ . . . . . . . . . . . . . . .

(ಈ ಕಲ್ಲಿನ ಎಡಗಡೆ ಮತ್ತೊಂದು ಕಲ್ಲು.)

22 ರಿಗೆಆಚಂದ್ರಾರ್ಕ್ಕ . . . . ಪುತ್ರಪೌತ್ರಪರಂಪರಿಯಾಗಿಸಲುವ್ವದು ‖ ಅಂಮನವರಸಂನಿಧಿಯುಮ . ದೀಪಎರಡಕ್ಕೆಮೂ ವತ್ತಆಪಕ್ಕಬಾಗ . ಅಂತೂತೊಂಭತ್ತುವರ . . . .

23 . ಸಿದಂಆನಾಗಲಾಪುರದ ಚತುಸ್ಸೀಮೆಯ ವಿವರವೀರಣಂಗೆಯಿಯಿಂದಂಮೂಡಲುಕೆಸವೆಯಿಂದಂತೆಂಕಲು . . . ಹಿರಿಯಿಂ ದಂಪಡುವಲುಕೆತ . ನಿಯ . . . . ಬಡಗಲು .

24 ಚತುಸ್ಸೀಮೆವೊಳಗುಳ್ಳ ಗದ್ದೆಬೆದ್ದಲುತೋಟತಡಿಕೆಲಣೆಅಚುಕಡುಉತಗುಯಲುಕಾಡಾರಂಭನೀರಾರಂಭಕರಿಕೊರಾಳಮ ಗ್ಗಮನೆಮಣಸುಂಕಸುವರ್ಣಾದಾಯನಿಧಿನಿಕ್ಷೇಪಜಲಪಾಸಾಣಅಕ್ಷೀಣಿ

25 ಆಗಾಮಿಸಿದ್ಧಸಾಧ್ಯಂಗಳಂಮೊದಲಾದಆಸಕಲಭೋಗ ತೇಜಸ್ವಾಮ್ಯಂಗಳಸಲುವಂತ್ತಾಗಿನಾಗಲಾಪುರವೆಂಬಪ್ರತಿನಾಮ ವನುಳ್ಳದೇವನೂರಗ್ರಾಮವನುಶ್ರೀರಂಗಪಟ್ಟಣದಶ್ರೀರಂಗನಾಥದೇವರಪ

26 ಟ್ಟಮಹಿಷಿಯಾದಶ್ರೀರಂಗನಾಯಕಿದೇವಿಯರದಿವ್ಯಶ್ರೀಚರಣಾರವಿಂದಯುಗಳಕ್ಕೆ ಶ್ರೀಮನ್ಮಹಾಮಂಡಲೇಶ್ವರಸೋಮವಂಶಾಭರಣ ರಾಮಆತ್ರೇಯಗೋತ್ರದಚಿಕ್ಕಮ್ಮಟಿಭೋಗಯದೇವಮಹಾಅರಸುಗಳಸಮ

27 ರ್ಪ್ಪಿಸಿದಗ್ರಾಮದಧರ್ಮಶಾಸನ

## 5

ಅದೇ ದೇವಸ್ಥಾನದ ಹೊರಪ್ರಾಕಾರದಲ್ಲಿ ಪೂರ್ವಕಡೆ ನಟ್ಟ ಕಲ್ಲು.

ಪ್ರಮಾಣ—6′ × 2′

ಗ್ರಂಥ ಮತ್ತು ಅರವಕ್ಷರ.

## 8

ಅದೇ ದೇವಸ್ಥಾನದ ಈಶಾನ್ಯದಿಕ್ಕಿನಲ್ಲಿರುವ ಕೊಳದ ಬಾಗಿಲಲ್ಲಿ ನಟ್ಟ ಕಲ್ಲು.

ಪ್ರಮಾಣ—6′ × 2′3″

1 ಶುಭಮಸ್ತು
2 ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕವರು
3 ಷಂಗಳು ೧೬೬೨ನೇ ಸಂದ ವರ್ತಮಾನವಾದ ರೌದ್ರಿನಾಮ
4 ಸಂವತ್ಸರದ ಶ್ರಾವಣ ಶು ೫ ಲು ಶ್ರೀಮದ್ರಾಜಾಧಿರಾಜ ಪ
5 ರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ ನರಪತಿ ಶ್ರೀಕೃ
6 ಷ್ಣರಾಜ ಒಡೆಯ್ಯರವರು ಮಹಿಶೂರ ನಗರದಲ್ಲಿ ರತ್ನ
7 ಸಿಂಹಾಸನಾರೂಢರಾಗಿ ಸುಖದಿಂ ಪೃಥ್ವೀಸಾಂಬ್ರಾಜ್ಯಂ

8 ಗ್ರೈಯ್ಯುತ್ತಿರಲು ಅಮರಂಬೋದು ಮುಕ್ಕೃಪ್ಪಮೊದಲಿ ಪಾತ್ರ
9 ನಾದ ವೇಲಾಯುದವೊದಲಿ ಪುತ್ರನಾದ ನಲ್ಲತಂಬಿಮೊದಲಿಯು
10 ಶ್ರೀ ಪಶ್ಚಿಮರಂಗನಾಥಸ್ವಾಮಿಯವರ ಸಂನ್ನಿಧಿಗೆ ಯೆಶಾಶ್ಯಾ
11 ಸ್ಯಭಾಗ್ಯದಲಿ ಸ್ವಾಮಿಯವರ ನಿತ್ಯಗಟ್ಲೆ ತಿರುಮಂಜನ ಕೈಂಕ
12 ರ್ಯಗಳಿಗು ಸಕಲ ಬ್ರಾಹ್ಮಣರಗಳ ಸ್ನಾನಪಾನಾಬಗಳಿಗು ಉ
13 ಪಯುಕ್ತವಾಗಿ ವೇದಪುಷ್ಕರ್ಣಿಯಂನು ನಿರ್ಮಾಣವಂ ಮಾಡಿ
14 ಶ್ರೀ ರಂಗನಾಥಸ್ವಾಮಿಯವರ ಚರಣಾರವಿಂದಂಗಳಿ
15 ಗ ಸಮರ್ಪಿಸ್ತನು ‖ ಆದಿತ್ಯಚಂದ್ರಾವನಿಲೋನಲಶ್ಚದ್ಯೌರ್ಭೂ
16 ಮಿರಾಪೋ ಹೃದಯಂಯಮಶ್ಚ । ಅಹಶ್ಚರಾತ್ರಿಶ್ಚ ಉಭೇ
17 ಚಸಂಧ್ಯೇ ಧರ್ಮಸ್ಯ ಜಾನಾತಿ ನರಸ್ಯ ವೃತಂ ।
(ಇನ್ನು ೬ ಪಙ್ತಿ ಅರವಕ್ಷರ)

## 34

ಹಿರೋಡೆ ಸಬ್ ತಾಲ್ಲೂಕು ಹಿರೋಡೆ ಹೋಬಳಿ ತಿರುಮಲಸಾಗರಛತ್ರಕ್ಕೆ ಪಶ್ಚಿಮದಲ್ಲಿರುವ ಸಂಬುದೇವಸ್ಥಾನದ ಮುಂದೆ ನಿಲ್ಲಿಸಿರುವ ಕಲ್ಲು.

ಪ್ರಮಾಣ—4′ × 3′

(ಮುಂಭಾಗ)

1 ಸ್ವಸ್ತಿಶಕವರಿಷ ೧೦೪೭ ವಿಶ್ವಾವಸು ಸಂವತ್ಸರ ಪುಷ್ಯಮಾಸದ
2 ಕೃಷ್ಣತದಿಗೆ ಸೋಮವಾರ ಸ್ವಸ್ತಿಶ್ರೀಮನ್ಮಹಾಮಂಡಲೇಸ್ವರಂ ತ್ರಿ
3 ಭುವನಮಲ್ಲತಳಕಾಡುಗೊಂಡ ಭುಜಬಳವೀರಗಂಗಪೊ
4 ಯ್ಸಳದೇವರು ಗಂಗವಾಡಿ ತೊಂಭತ್ತಱುಸಾಸಿರಮಂ ಏಕ
5 ಚ್ಛತ್ರಛಾಯೆಯಿಂ ಸುಕರಾಜ್ಯಂಗೆಯುತ್ತಿರೆ ಬಳಗಾರಕುಲ
6 ಬೀಮಿಸೆಟ್ಟಿಗಂ ಬೋಕಬ್ಬೆಗಂ ಪುಟ್ಟಿದಂಗಿಋವಮ್ಮಣಂ ಇಂಗಿಲಿಕ
7 ನಕುಪ್ಪೆಯ ಸೆಯಂಬುದೇವರಿಗೆರಡು ಬಟ್ಟುರದೇವಾಳ್ಯವಂ ಮಾ
8 ಡಿಸಿದಂ ಉತ್ತರದೆಸೆಯ ಪಳ್ಳವಂಕಟ್ಟಿಸಿದ ಧರ್ಮರಾಸಿ
9 ಪಂಡಿತಂ ಮದವಳಿಗ ಹೊನ್ನಪಯ್ಯಂ ಇರ್ವ್ವರ
10 ಮಕಳಸಮುಭಟ್ಟರು ‖ . . ಯ ಉಪಹಳ್ಳಿಯ ರುದ್ರಾ
11 ಕ್ಷಿಪಣ್ಡಿತರ ದೀಕ್ಷೆಯುಮಗಂ ಧರ್ಮ್ಮರಾಸಿ ಪಂಡಿತರಿಗೆ ಧಾ
12 ರಾಪೂರ್ವ್ವಕಂ ಮಾಡಿ ಬಿಟ್ಟರ್ ಇಧರ್ಮ್ಮವನಾ
13 ವನಾನುಮಳಿದರಪ್ಪಡೆ ಗಂಗೆಯುಬಣವೊಸಿಯೊ
14 . ತ್ರಿ ಅಳಿದಬ್ರಮ್ಹಾತಿಯ ‖ ಅರಸಗವು
15 ಮಕಳಸಮುಭಟ್ಟನು ದೇವಡಿಗಗೆ ‖ ಕೊಟ್ಟಂ ‖

(ಹಿಂಭಾಗ)

1 ಸ್ವಸ್ತಿನಮಸ್ತುಂಗಶಿರಶ್ಚುಂಬಿ ಚಂದ್ರಚಾಮರ
2 ಚಾರವೇ । ತ್ರೈಳೋಕ್ಯನಗರಾರಂಭಮೂಲಸ್ತಂಭಾ
3 ಯಸಂಭವೇ ‖ ಸಕವರುಷ ೧೦೪೮ ವಿಸ್ವಾ
4 . . . . . . . ಶ್ರಿಯಾ
5 . . . . . . ಯ . .
6 . . . . . . ಸಂಪನ್ನರು
7 . . . . . ಗೋಕುಲರು

8 . . . . . . . . ತ್ರ)

. . . . . . . .

15 ಸ್ವಸ್ತಿ ಶ್ರೀ . ಯ . . . ಅತ್ಯನ್ತವಿಲತ್ವಾಯುಕ

16 . . . . . . ಸಹಿರಣ್ಯೋದಕಪೂ

17 ರ್ವ್ವಕಂ . . . . ಸಮಂಬುದೇವರಅಂಗಭೋಗ . . . .

18 . . ರಣಕಂಬ ೪ ಭೂಮಿಕ . . . . ಯರ್ನಸ . . ನಿ . ಬ

19 ಬಿದ್ದಲೆ ಸಹಿತ ಉತ್ತರಾಯಣ ಸಂಕ್ರಾನ್ತಿಯಲುಬ್ಬತಿದಿಪ

## 47

ಮೇಲ್ಕೋಟೆ ಹೋಬಳಿ ಹಳೇಬೀಡು ಊರುಬಾಗಲಲ್ಲಿ ನಟ್ಟ ಕಲ್ಲು.

1 ಶುಭಮಸ್ತು ಸ್ವಸ್ತಿ ಜಯಾಭ್ಯುದಯ ಶಾಲಿವಾಹನಶಕ

2 ವರ್ಷ ಸಾವಿರದ ಅಯಿನೂರ ಆರನೆಯ ತಾರಣ ಸಂ

3 ವತ್ಸರದ ಜೇಷ್ಟಶುಧ ೧೫ ಯಲು ಸೋಮೋಪರಾಗಪುಣ್ಯಕಾಲ

4 ದಲಿ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರವೀರಪ್ರತಾಪ

5 ಶ್ರೀರಂಗದೇವ ಮಹಾರಾಯರು ರತ್ನಸಿಂಹಾಸನಾರೂಢರಾಗಿ

6 ಪೃಥ್ವೀರಾಜ್ಯಂಗೆಯುತ್ತಿರಲು ಶ್ರೀಮನ್ಮಹಾಮಂಡಲೇಶ್ವರ ರಾಮ

7 ರಾಜತಿರುಮಲರಾಜೈಯ್ಯನವರ ಕಾರ್ಯಕ್ಕೆ ಕರ್ತರಾದ ದಳವಾಯಿ . ನ

8 ಟಿವೆಂಕಟಪ್ಪನಾಯಕರು ವಿಶ್ವೇಶ್ವರ ನಾರಸಿಂಹದೇವರ ಸಂಧ್ಯದಲಿ

9 ಮಣಿಕರ್ಣಿಕಾತೀರದಲಿ ಶ್ರೀರಂಗಪಟ್ಟಣಕ್ಕೆ ಸಲುವ ಹಳೆಯಬೀಡು

10 ಗ್ರಾಮವನೂ ಅದಕ್ಕೆ ಸಲುವ ಗ್ರಾಮಗಳು ಚಿಕನಹಳ್ಳಿ ೧ ಬೊರಯನ

11 ಹಳ್ಳಿ ೧ ಜಂಜಾಪುರ ೧ ಬಂಕನಹಳ್ಳಿ ೧ ಹೊಸಹಳ್ಳಿ ಪುರ ೧

12 ಯಿಾ ಗ್ರಾಮಗಳನು ಚಂದ್ರಗ್ರಹಣ ಪುಣ್ಯಕಾಲದ

13 ಲಿ ನಾನಾಗೋತ್ರದ ನಾನಾಸೂತ್ರದ ನಾನಾಶಾಖೆಯ ನಾನಾನಾಮಧೇಯ

14 ದ ಮಹಾಜನಂಗಳಿಗೆ ಸ್ಯಿರಂಣ್ಯೋದಕದಾನಧಾರಾಪೂರ್ವಕವಾಗಿ

15 ಧಾರೆಯನೆರದು ಕೊಟ್ಟ ಮಾನ್ನಿಯ ಹಳೆಯಬೀಡಿಗೆ ಪ್ರತಿನಾಮಧೇ

16 ಯವಾದ ತಿರುಮಲಸಮುದ್ರವನು ಐದುಗ್ರಾಮಗಳು ಸಹಿತವಾಗಿ

17 ಆಚಂದ್ರಾರ್ಕಸ್ಥಾಯಿಗಳಾಗಿ ಪುತ್ರಪೌತ್ರ ಪಾರಂಪರಿ

18 ಯಾಗಿ ಸುಖದಲಿ ಅನುಭವಿಸಿಕೊಂಡು ಬಹಿರಿ ಎಂದುಕೊ

19 ಟಸಿಲಾಶಾಸನಪ್ರತಿ ಯೇಕೈವಭಗಿನೀಲೋಕೇ ಸರ್ವೇಷಾಮೇವ

20 ಭೂಭುಜಾಂನಭೋಜ್ಯಾನಕರಗ್ರಾಹ್ಯಾವಿಪ್ರದತ್ತಾವಸುಂಧರಾ ।

## 49

ಅದೇಹೋಬಳಿ ಹೊಸಕೋಟೆ ಸಿಷ್ಕ್ವಮೇಶ್ವರ ದೇವಸ್ಥಾನದ ಬಾಗಲಿಗೆ ಉತ್ತರ
ಕಡೆ ಹೊರಭಿತ್ತಿಯಲ್ಲಿ.

ಶ್ರೀಮತ್ತ್ರೈಲೋಕ್ಯಪೂಜ್ಯಾಯ ಸರ್ವ್ವಕರ್ಮ್ಮ ಸುಸಾಕ್ಷಿಣೇ ಫಲದಾಯಿನವೋವಿಶ್ವಾಂಕೇಶವಾಯಶಿವಾಯಚ ॥ ಶ್ರೀ
. . . . . . . ಟಿಗೆ . . . .

2 ವಪ್ರಿಯಾತಸ್ಯ ವಿಚಲದೇವಿತಾಭ್ಯಾಂಮಥ . . . . . . . . . . . ಸ್ವಸ್ತಿಸಮಧಿಗತಪಂಚಮಹಾಶಬ್ದಮಹಾಮಂಡ
ಳೇಶ್ವರದ್ವಾರಾವತೀಪುರವರಾಧೀ . . .

3 ಯದುಕುಳಕಳಶಕಳಿತಸ್ರಿಪವಮ್ಮ್ರ್ಮಪವರ್ಮ್ಮಕ್ರವಮೂಲ . . . . . . . . . . . . . . . .
ಕಾಲುಬ್ಧವರಪ್ರಸಾದನು . ಶ್ರೀಮನ್ಮ . . . .

4 ರವಿಂದವಂದವಂದನವಿನೋದನನುಂ ಅಕ್ಷುಣ್ಣಲಕ್ಷ್ಮೀಲಕ್ಷಿತ . . . . . . . . . . . . . . . . . . . . . .
. . ದಹಿತಭಯಚಕಿತವಮುಖಬಿಂಬಾ . . . .

5 ಟಿಕಪಾದಪೀಠವಿನ್ಯಸ್ತಪದತಳನುಂ ಶ್ವೇತಾತಪತ್ರ . . . . . . . . . . . . . . . . . . . . . . . . .
. . . . . . . ವೀಜ್ಯಮಾನನುಂ ಸಾಂಡೀರಸ . . . . . .

6 ಕರ್ಣ್ನಗನೋತ್ತೀರ್ಣ್ನಹರ್ಷ ಪುಳಕಸನ್ನಾನನುಂ ಬಿಪುಳ . . . . . ವಿವಿಧರತ್ನಖಚಿತಕರ್ಣ್ನಕುಂಡಲ . . . . . . .
. . . . . . . . . ಅನೂನವಿಭವಾಳೋಕನಾಗ . . .

7 ಣ್ಡಿತಗಂಡಸ್ಥಳನುಂ ವಿಕಟವಕ್ಷಸ್ಥಳವಿರಾಜಮಾನವಿಪುಳವಿಮಳ ಮುಕ್ತಾಫಳವಿರಾಜಮಾನವಿಪುಳವಿಮಳಮುಕ್ತಾಫಳವಿಕೀರ್ಣ
ಕಾನ್ತಿದಂತುರಿತಕೇಯೂರಕೀರ್ತಿಮುಖ . . . .

8 ಮಧುರವಚನಮಿಳಿತಮಂದಸ್ಮಿತ ಸುಧಾರಸಸ್ಯಂದಿವದನವಿ[ಧು]ಬಿಂಬಪ್ರಸಾದರಾರಹಿತ ಖಳ್ಗನಿಗಳನುಂ ನೇಪಾಗಮನ .
. . . ಸಮಯಕಾಮಿನೀಕದಂಬಚಳನಚಳಸಿಂಜ . . . .

9 ಮಾನಾಹೋದ್ಬುದ್ಧಕುಸುಮಖೇಡಿತಬಳ ಮಧುಕರ ನಿಕರಝಂಕಾರಮುಖರಿತಾಸ್ಥಾನರಂಗನುಂ ನೀತಿನಿತಂಬಿನೀಹೃದಯ
ನಿಹಿತಗಂಭೀರಾಂತರಂಗನುಂ ವೀರಲಕ್ಷ್ಮೀ . . . . . . . . . . . . . . . ಭೃತ್ಯಾಳನಿಯುಕ್ತ

10 ಕ್ಷೇಮನುಂ ಸಂಗೀತಪ್ರಸಂಗಭಂಗೀಸಂಗತಚತುರಭರತನುಂ ತರ್ಕ್ಕವಿದ್ಯಾವಿಶಾರದವಿಚಾರನಿರತನುಂ ಶಬ್ದವಿದ್ಯಾಸಮಗ್ರಲಕ್ಷ
ಣಸುಶಿಕ್ಷನುಂ ವೇದವಿದ್ಯಾಪರೀಕ್ಷಾದಕ್ಷ . . . . . . . . . . . . . . . . . . . ಮೂಳಸತ್ಯ

ಮಣಿಭೂ

11 ಷನುಂ ಕವಿತ್ವತತ್ವನಿಶಿತಬುದ್ಧಿಯುಂ ಅ[ಮಂ]ಧ್ಯಮಂತ್ರಸಿದ್ಧಿಯುಂ ಲೋಕಾಲೋಕನಶ್ರೀಧರಾನುಕಾರನುಂ ಸಮುತ್ಪನ್ನ
ಗುಣಾಧಾರನುಂ ಕಾಂಭೋಜವಾಜಿಸಂಚರಣ ತರಳ . . . . . . . . . . . . . . . . . . ವಿಧು

(ದುವಳಯ)

12 ದ್ವಳಯ ಗಜರಾಜ ಗಂಡವಿಜಯ ಡಿಂಡಿಮಾಯಮಾನೋದ್ದಮರಮಧುಕರಪಟಳಘಟಿತಜಂಘಾತಪಕ್ಷನುಂ ಪರವಧೂಪುತ್ರ
ನುಂ ಕರಾಳಶ್ರೀಕರವಾಳಸಾದ್ಧೂಗಳ ನಿರ್ಧ್ಧಾರಿತಮಂ . . . . . . . . . . . . . . . . . . ಳದಂ

ಭೋಳಿಯುಂತು

13 ಳುನಿಪ್ರವಾಳಹೃದಯವಿದಳನಪ್ರಕಟರಣಕೇಳಿಯುಂ ಜಗದ್ದೇವಬಳವಿಜಯ ಭೈರವನುಂ ಸೋಮೇಶ್ವರಪ್ರಚಂಡವೇದಂಡ ಕಬ
ಳನಪ್ರಬಳ ಕಂಠೀರವನುಂ ಚಕ್ರಗೊಟ್ಟಪುರಮಾಣಿಕ್ಯ . . . . . . . . . . . . . . . . . ವನಿಪ್ರ

ಣಚಾಪನುಂ ನ

14 ರಸಿಂಹಬ್ರಹ್ಮಭೂಜಭುಜನ ಪ್ರಭಂಜನನುಂ ಕಳಪಾಳಕಪಾಳಚಷಕಶೋಣಿತಪಾನ ತುಷ್ಟಯೋಗಿನೀಮನೋರಂಜನನುಂ
ಚೆಂಗಿರಿಭುಜಂಗಭಂಗಕರಖಡ್ಗಗರುಡ . . . . . . . . . . . . . . . . . . . . . . . .

15 ಕಂಡಾಳನುಂ ಬಳಪದೋದ್ಧೂತಧೂಳೀಧೂಸರಿತಚಿಕ್ಕಪಾಳ ಚೆಂಗಿರಿಪೆರ್ಮ್ಮಾಳಕುತ್ಕೀಳ ಚೋಳನಚತುರಸಾಮ್ರಾಜ್ಯ
ನುಂ ಪಟ್ಟಪೆರ್ಮ್ಮಾಳಪ್ರತಿಷ್ಠಾನುಷ್ಠಿತಾತ್ಮಸೈನ್ಯನುಂ ಆತ್ಮೀಕೃತತಳವನಪು . . . . . . . . .

. . . . . . . . ಮಾಹಿಯುಂ

16 ದೂರೀಕೃತಾರಿವರ್ಗ್ಗನುಂ ಪೂರೀಕೃತನೀಳಪರ್ವ್ವತನುಂ ಉರರೀಕೃತಕೋಲಾಲಪುರನುಂ ಉನ್ಮೂಳಿತಕೋವತೂವಪುರನುಂ
ಉತ್ತಾರಿತತರೆಯೂರನುಂ ಉಲ್ಲಂಘಿತವಲ್ಲೂರನುಂ ಪ್ರೋದ್ಘಾಟಿ . . . . . . . . . . . . . . . . . .

ಚೀಪುರನುಂ ಉದ್ದಂ

17 ಡಿತ ಪ್ರಚಂಡತೇ (ಈ ಮುಂದೆ ಸುಮಾರು 80 ಅಕ್ಷರಗಳು ಹೋಗಿವೆ).

18 ಯಕಾನ್ತಿಪರ (ಡಿಟೋ)

19 ರಮದಮರಾಳ (ಡಿಟೋ)

20 ಪಕವಾಳವ (ಡಿಟೋ)

21 ಶ್ವರದೇ (ಡಿಟೋ)

22 ಲ್ಲರು (ಡಿಟೋ)

23 ವಿಷ್ಣುವರ್ದ್ಧನಪೊಯ್ಸಳದೇವರು ತಮ್ಮೊಪ್ಪತುಳುವಲದೇವಿಯುಂತಮ್ಮಾತ್ಮಾಗ್ರಜನ

24 ಪ್ಪನಿಪ್ರಭೂಮನುವಿರ್ದ್ದು . ಮತುಸಿಮಯೋಗಿಧರ್ಮ್ಮಪ್ಪರಭ[illegible]ಗೆಧಾರಾಪೂರ್ವ್ವಕ

25 ವೆಱದುಕೊಟ್ಟರು ಈಧರ್ಮವನು . ಸ್ವರಾದವಂಗಂಗೆಯತಡಿಯಲುಱ .
26 ವಸುಧೆಯೊಳ್ಕವಿಲೆಯುಮಂ ಬ್ರಾಹ್ಮಣರುಮಂತಾಯುಕೊಂದಪಾಪದಲಿಪ್ಪೋಪ್ಪರು
27 ಸ್ವದತ್ತಂಪರದತ್ತಂವಾಯೋಹರೇತಿವಸುಂಧರಾಷಷ್ಟಿರ್ವ್ವ
28 (ರ್ಷ್ಷರಾಷಷ್ಟಿ) ಸಹಸ್ರಾಣಿವಿಷ್ಠಾಯಾಂಜಾಯತೇಕ್ರಿಮಿ ||

## 25

ಅದೇ ದೇವಸ್ಥಾನದ ಉತ್ತರಗೋಡೆಯಮೇಲೆ ಪಶ್ಚಿಮ ಮುಖವಾಗಿ ಬರೆದಿರುವುದು.

1 ಶ್ರೀಬಾಣದಕೊಟ್ಟರಹೆಗ್ಗಡೆಕಲಿಯಣ್ಣನಸೇನಬೋವನಾ
2 ಗಣ್ಣಶ್ರೀಬಿಕೇಸ್ವರದೇವಂಗೆತಾನಾಬೆವಿಗೆಸಹಿತವಾಗಿಚಂದ್ರಾ
3 ರ್ಕ್ಕವಖಂಡಿತದೀಪಂನಡವಂತಾಗಿ || ವಿಕಾರಿಸಂವತ್ಸರದವೈಶಾಖ
4 ಸುದ್ಧ೧ಸೋಮವಾರದಂದುಪೊಂಗೆತಿಂಗಳಿಂಗೆಹಾಗವೊಂದಬಿಟ್ಟ
5 ಶ್ರೀಬಿಕೇಶ್ವರದೇವಸ್ಥಾನಪತಿಗಳಬ್ರಹ್ಮಪುರಿಗಳವಸದಲುಕೊಟ್ಟಗೋವ
6 ರಸವೊಂದಕೆಬಸ್ತಿಗಂಪಾಳಿಕೆಸರ್ವ್ವಂಕಾಲಂನಲಿಸುವಂತಾಗಿತಾ
7 ನಾಬೆವಿಗೆಸಹಿತವಾಡಿದಧರ್ಮ್ಮವುಂಗಳವುಹಾ
8 ಶ್ರೀಶ್ರೀ

## 56

ಹಿರೋಡೆ ಹೋಬಳಿ ತೊಂಡನೂರು ಕೃಷ್ಣಸ್ವಾಮಿದೇವಸ್ಥಾನದ ಹೊರಗಿನ ಗೋಡೆಯಮೇಲೆ

ಗ್ರಂಥ ಮತ್ತು ಅರವಕ್ಷರ

## 61

ಅದೇ ದೇವಸ್ಥಾನದ ಮಧ್ಯ ಪ್ರಾಕಾರದಲ್ಲಿ ಬಾಗಿಲ ದಕ್ಷಿಣಕಡೆ ಗೋಡೆಯಮೇಲೆ

1 ಸ್ವಸ್ತಿಶ್ರೀಮನ್ಮಹಾಮಂಡಳೇಶ್ವರಂತಳಕಾಡುಗಂಗವಾಡಿನೊಣಂಬವಾಡಿ . ಉಸುಗೆಬನವಾಸೆಹಾನುಂಗಲ್ಲೊಂಡಭುಜಬ
2 ಳವೀರಗಂಗನಸಹಾಯಶೂರನಿಶ್ಶಂಕಪ್ರತಾಪಹೊಯ್ಸಳಬಲ್ಲಾಳದೇವರುಶ್ರೀಮದ್ರಾಜಧಾನಿದೋರಸಮುದ್ರದ
3 ನೆಲೆವೀಡಿನಲುಸುಖಸಂಕಥಾವಿನೋದದಿಂಪೃಥ್ವೀರಾಜ್ಯಂಗೆಯುತಮಿರಲುಶ್ರೀಮನ್ಮಹಾಪ್ರಧಾನಸರ್ಬ್ಬಾಧಿಕಾರಿಮ
4 ಹಾಪಸಾಯತಂತ್ರಾಧಿಷ್ಟಾಯಕಂಹೆಗ್ಗಡೆಸುರಿಗೆಯನಾಗಯ್ಯನಬೆ . ದಿಂದಂನಾಯಕಹೆಗ್ಗಡೆಮಾರಣಂ
5 ಮನ್ಮಥಸಂವತ್ಸರದಚೈತ್ರಸು೧ | ಶ್ರೀಮದನಾದಿಯಗ್ರಹಾರಂತೊಂಡನೂರನಡುವಣ . . . . . . . .
6 ಯಾದಪಡಿಯಲೆಮಳೆಯಕ್ಕಬಿಲ್ಕಂಬಳಯತೋಟದಲುಎಲೆಯಗುಳಿಇನೂಱಗುಳಿಯುಂ . . . .
7 ಯಕ್ಕುಳಿಯಗಾಣವಗದೆಮೂವತಗುಳಿಯುಂಅನ್ತುಇನೂಱಎಂಭತುಗುಳಿಯುಮಂನಾಯಮಂಸರ್ಬಬಾಧಾಪರಿಹಾರವಾಗಿಧಾ
8 . . ರ್ವ್ವಕಂಮಾಡಿಕೊಟ್ಟರು || ಇಧ . . . . . . . ೩ಯಲುಗಾಯಿರಕವಿಲೆಯುಂಸಾಯಿರಬ್ರಾಹ್ಮ . . ಯ .
ನಗ್ಗ್ರಕೊ . . .
9 . . ಕೊ . . . || ಸ್ವಸ್ತಿಶ್ರೀಮನು . . . ಹೆಗಡೆಯಾ . . . ಸಾ . . . . ಸರ್ವ್ವಬಾಧಾಪರಿಹಾರ
10 . . . . ಕಂ ||

## 66

ಅದೇ ಗ್ರಾಮದ ಕೈಲಾಸೇಶ್ವರದೇವಸ್ಥಾನದ ಪಶ್ಚಿಮದಲ್ಲಿರುವ ಗೋಡೆಯಮೇಲೆ

ಗ್ರಂಥ ಮತ್ತು ಅರವಕ್ಷರ

## 67, 69, 69a, 70, 70a

ಅದೇ ದೇವಸ್ಥಾನದ ತಳಪಾದಿಯಲ್ಲಿ

ಗ್ರಂಥ ಮತ್ತು ಅರವಕ್ಷರ

## 72

ಅದೇ ದೇವಸ್ಥಾನದ ಉತ್ತರಗೋಡೆಯಮೇಲೆ

ಗ್ರಂಥ ಮತ್ತು ಅರವಕ್ಷರ

## 75

ಮೇಲುಗೋಟೆ ಹೋಬಳಿ ಸುಂಕಾತೊಂಡನೂರು ಗ್ರಾಮಕ್ಕೆ ಪೂರ್ವ ರಾಕ್ಷಸಮ್ಮನಗುಡಿಗೆ ದಕ್ಷಿಣ ೧ನೆಯ ವೀರಗಲ್ಲು

1 ಶ್ರೀಮತುಬಹುಧಾನ್ಯಸಂವತ್ಸರದಸ್ರಾವಣ
2 ಬ | ದಸಮಿಆದಿವಾರದಂದುಉದಯಣದಂಡನಾಯ
3 ಕನಮಗವುಸ್ಸರವಟ್ಟದದಾಸಯಹೆಗ್ಗಡೆಯ . . .
4 . . . . . . . . . . . . . . . . ನಾಕಲಿಗಧರ್ಮವಾ . . . ಲ್ಲಿಯೆಸದ ||

## 81

ಮೇಲುಗೋಟೆ ಗ್ರಾಮದಲ್ಲಿ ತಿರುಮಂಗೈಆಳ್ವಾರ್ ದೇವಸ್ಥಾನದ ದಕ್ಷಿಣದಿಕ್ಕಿನಲ್ಲಿ ಹುಟ್ಟುಬಂಡೆಯಮೇಲೆ

ಅರವಕ್ಷರ

## 86

ಅದೇ ಗ್ರಾಮದ ನಮ್ಮಾಳ್ವಾರ್ ದೇವಾಲಯದ ರಂಗಮಂಟಪದ ಉತ್ತರಕಡೆ ನೆಲದಮೇಲೆ ಹಾಸಿರುವ ಕಲ್ಲು

ಪ್ರಮಾಣ—5'6" × 1'3"

1 ಶುಭಮಸ್ತು ಶ್ರೀಮತೇರಾಮಾನುಜಾಯನಮಃಉತ್ತರೇಸಹ್ಯಜಾತೀರೇಸರ್ವಸ್ಥಾನಸಮುಚ್ಛ್ರಯಃ
2 ನಾರಾಯಣಗಿರೌಶ್ರೀಮಾನಾಸ್ತೇನಾರಾಯಣಸ್ಸ್ವಯಂ | ಸ್ವಸ್ತಿಶ್ರೀಜಯಾಭ್ಯುದಯಶ್ರೀಮನ್ಮಹಾ
3 ರಾಜಾಧಿರಾಜರಾಜಪರಮೇಶ್ವರಅರಿರಾಯವಿಭಾಡಭಾಷೆಗೆತಪ್ಪುವರಾಯರಗಂಡಚತುಸಮು
4 ದ್ರಾಧಿಪತಿಶ್ರೀವೀರಪ್ರತಾಪವಿರೂಪಾಕ್ಷಮಹಾರಾಯರುಸುಗಸಂಕಥಾವಿನೋದದಿಂರಾಜ್ಯಂ
5 ಗೆಯಿಉತ್ತಿರಲು || ಶಕವರುಷ೧೪೧೧ನೆಯವರ್ತ್ತಮಾನವಾದವಿರೋಧಿಸಂವತ್ಸರದಆಶ್ವಯುಜಬ
6 . . ಪುಣ್ಯಕಾಲದಲುಶ್ರೀಮದನಾದಿಮಹಾಸ್ವಾಮಿಸ್ಥಾನಂವಯಿಕುಂಠವರ್ದ್ಧನಕ್ಷೇತ್ರಭೂಲೋಕವಯಿಕುಂಠಜ್ಞಾ
7 ನಮಂಟಪಾಪರಾಭಿಧಾನದಕ್ಷಿಣಬದರಿಕಾಶ್ರಮಶ್ರೀಯಾದವಗಿರಿಯಾದತಿ
8 ರುನಾರಾಯಣಪುರದಶ್ರೀನಾರಾಯಣದೇವರದಿವ್ಯಲಕ್ಷ್ಮಿದೇವಿಯರುಶ
9 ಟಗೋಪಮುನಿಮುಕಯಿಂಕರ್ಯ್ಯದುರಂಧರರಾದನಾಚಿಯರಂಮನವರುಕುರಂಗ
10 ವಳಂಪಾಡಿಯುಪರಮವಯಿದಿಕವಯಿಷ್ಣವಮಹಾಜನಂಗಳಿಗೆಕೊಟ್ಟಧರ್ಮ್ಮ
11 ಸಾಧನದಕ್ರಮವೆಂತೆಂದರೆನಾನುಯಿಂಮಡಿಪ್ರಹುಢದೇವರಾಯರಾದಮಲ್ಲಿಕಾರ್ಜು
12 ನಮಹಾರಾಯರಕಯ್ಯಲೂಸಣಬಿಮುಕ್ಕುಳಿಯನಾಡನುಶ್ರೀನಾರಾಯಣದೇವ
13 ರನಾಮದಲೂಆಚಂದ್ರಾರ್ಕ್ಕಸ್ಥಾಯಿಯಾಗಿದಾನಧಾರಾಪೂರ್ವ್ವಕವಾಗಿತಾಂ
14 (೧) ಬ್ರಸಂಧನಮಾಡಿಸಿದಶ್ರೀನಾರಾಯಣದೇವರಿಗೆಸಮರ್ಪಿಸಿದಗ್ರಾಮದೊ
15 ಳಗೆಶ್ರೀನಾರಾಯಣದೇವರಚರಣಾರವಿಂದಭರತತತಯಿಕನಿಷ್ಠ
16 ರತುಲಾಪುರುಷಾದಿಮಹಾದಾನವ್ರತದೀಕ್ಷಿತಅಭಿನವಕುಲಶೇಖರರಾದಶ್ರೀ
17 ಮನ್ಮಹಾಪ್ರಧಾನಂತಿಂಮಣ್ಣದಣ್ಣಾಯ್ಕ್ಕವೊಡೆಯರುಶ್ರೀನಾರಾಯಣದೇ
18 ವರದಿವ್ಯಶ್ರೀಪಾದಪದ್ಮಾರಾಧಕರುಶ್ರೀರಾಮಾನುಜಾಚಾರ್ಯ್ಯರಪ್ರಥಮಶಿಷ್ಯರಾದ
19 ವೇದಮಾರ್ಗಪ್ರತಿಷ್ಠಾಚಾರ್ಯ್ಯರುಅಯಿವತ್ತಿಬ್ಬರುಶ್ರೀವಯಿಷ್ಣವರುಕೂಡಿಆ
20 ಳ್ವಾರುದೇವರ ಕಯಿಂಕರ್ಯ್ಯಕ್ಕೆಂದುಕುರುಕುಳಿನಂಪಡಿಯಲೂಆಳ್ವಾರಸೇವೆ
21 ಯಂಮಾಡಿಕೊಂಡುಯಿಪಶ್ರೀವಯಿಷ್ಣವಮಹಾಜನಂಗಳಿಗೆಆಚಂದ್ರಾರ್ಕ
22 ಸ್ಥಾಯಿಯವಾಗಿದಾನಧಾರಾಪೂರ್ವ್ವಕವಾಗಿಶ್ರೀನಾರಾಯಣದೇವಸಂನಿಧಿಯಲುಕೊ
23 ಟ್ಟನಂಮಂಶವಾಗಿಕೊಟ್ಟಯಿದಂಮಕುಳಿಯಃ ಊರಿಯಕಾಲುವಳಿನಳಿನಹಳ್ಳಿ

24 ಯಗ್ರಾಮದಗೃಹನಿವೇಶನಪರಾಂಕುಶಸಮುದ್ರದಕೆಱೆಯಕೆಳಗಣಗದ್ದೆಬೆ
25 ದ್ದಲೂ ಲೆಕ್ಕಯಿಪ್ಪತ್ತಆಱುಹೊಂನುಕುರುಕುಳವುಪಡಿಗೃಹನಿವೇಶನ
26 ಮುಂತಾಗಿ ಸರ್ವ್ವಮಾನ್ಯವಾಗಿ ಕೊಟೆವಾಗಿ ತಿರುಪತಿಯ ಕುಳವಂಪಡಿಯ ಚತುಸೀಮೆಯ
27 ವಿವರವಾದರಿಸರತಿ ‖ ಇಂದಪಡುವಲೂ ಕಂಧಾಡಿಯಚೆಂನರಸರ ಬೃಂದಾವನದಿಂದ ಬಡಗ
28 ಲೂ ಹಿರಿಯಬೀದಿಯಿಂ ಮೂಡಲೂ ಕಲ್ಯಾಣಸರಸ್ವತಿಗೆ ಹೋಹಸೂರ್ಯ್ಯವೀಥಿಯಿಂ ತೆಂಕ
29 ಲೂ ಅಂತುವಾಮನಮುದ್ರೆಯಕಲ್ಲಿಂದ ಒಳಗಾದಚತುಸೀಮೆಯ ಒಳಗಾದ ಗೃಹನಿವೇ
30 ಶನವನು ಹದಿನೂಱುಗೃಹವನು ಕಟ್ಟಿಕೊಂಬಂನಳನಹಳಿಯ ಗ್ರಾಮದೊಳಗೆ ತೆಂಕಣಕೋಟೆಯ
31 ಮೇಡಿನಕೇರಿಯ ಮನೆಯನು ಹದಿಮೂಱುನಿವೇಶನವನುಮಾಡಿ ಅದಱೊಳಗೆ ಆಯಿವತಿ
32 ಬ್ಬರಿಗೆ ಒಂದುನಿವೇಶನ ಕುರುಳವಳಂ ಪಡಿಯಶ್ರೀವಯಿಷ್ಣವಮಹಾಜನಂಗಳಿಗೆಗೃ
33 ಹನಿವೇಶನ ೧೬ ಅಂತು ಹದಿಮೂಱು ನಿವೇಶನದಗದ್ದೆಬೆದ್ದಲು ಚತುಸೀಮೆಯವಿವರನಳ
34 ನಹಳಿಯತೆಂಕಲುಹೋದ ಒಣಿಮೇರೆಯಾಗಿ ಪರಾಂಕುಶಸಮುದ್ರದಕೆಱೆಯಕೋ
35 ಡಿನಿಂ . ಹಾಯಿದಾಗದ್ದೆ ತೆ . ಕಸೀಮೆಮೇರೆಯಾಗಿ ಪಡುವಸಲುಉದುಕದಬದಕೆಱೆಯನೀ
36 ರ್ಕೊಂಡು ಯಿಹಸೀಮೆಯಿಂಬಡಗಲೂ ಎತ್ತುಗಟ್ಟುವ ಒರಡಿಯಚಿಲುಮ . . .
37 ಯ ಎಡಸೀಮೆಯಿಂ ಮೂಡಲೂನಳನಹಳಿಯ ಮಳಲನಕೆಱೆಯ ಪಡುವಣ ಕೋಡಿ
38 ಯಬೆಟಮೇರೆಯಾಗಿಹಾದಎಡೆತನದಿಂತೆಂಗಲುಲೊಕಿಯಮಲನಕೆಱೆಯಒಳ .
39 ಣೆಯ . ಚಿಯಿಂ . : ದಲೂ ಉರಕೋಟೆಯಿಂತೆಂಕಲುಯಿಂತೀಚತುಸೀಮೆಯೊ
40 ಳಗಾದ ಬೆದ್ದಲು ಗ ೬೬ ಸೇನಬೋವರಾಮಾನುಜಗೆ ಬೆದಲುಗ॥೦ ಉಭಯಂಬೆದ್ದ
41 ಲೂಗ ೬೬॥೦ ಪರಾಂಕುಶಸಮುದ್ರದಕೆಱೆಯಕೆಳಗಣಗದೆಯಲೂ ಸೇನಬೋವರಾಮಾ
42 ನುಜಗೆ ಬೀಜವರೀಗದೆ ಖ೦|೦ ಅಕ್ಷರದಲೂ ಅಯಿಗುಳದ ಗದೆಯನು ಆಯಿದಹ
43 ಣದಹೊಲನನು ಕೊಟೆವಾಗಿ ಪರಾಂಕುಶಸಮುದ್ರದ ಕೆಱೆಯಕೆಳಗಣಗದೆ ಬೆ
44 ದಲೂ ನಳನಹಳಿಯ ತೆಂಕಣಕೇರಿಯ ಗೃಹನಿವೇಶನ ಕುರುಗವಳಂ ಪಡಿಯಗೃಹನಿವೇ
45 ಶನಮುಂತಾಗಿ ಗೃಹಗದೆಬೆದ್ದಲನೂ ಅನುಭವಿಸಿಕೊಂಡುಬಹ ಶ್ರೀವಯಿಷ್ಣ
46 ವರುಗಳಗೋತ್ರನಾಮದ ವಿವರಕೌಂಡಿನ ಗೋತ್ರ ಆಪಸ್ತಂಭಸೂತ್ರದ ತಿರುವರಂಗಪ್ಪ
47 ರುಮಾಳಗಳ ಮಕ್ಕಳು ಪಿಳೆಯ್ಯಂಗಳು ಲೋಹಿತ್ತಗೋತ್ರದ ಅಶ್ವಲಾಯನಸೂತ್ರದ ರಾಮಾನುಜ
48 ಯ್ಯಂಗಳಮಕ್ಕಳು ಬಿಳೆಯ್ಯಂಗಳು ಕವುಶಿಕಗೋತ್ರದ ಆಪಸ್ತಂಭಸೂತ್ರದ ಕಾಳಮೇಘಪ್ಪಾರ
49 . . . . ದಿ . . ದಾ . ರ ಅಂಣನು ವಿಶ್ವಾಮಿತ್ರಗೋತ್ರದ . . ಮುನಿ ಸೂತ್ರದ ಜಂ
50 . . . ಮನೆನೆಯಂಣಗಳು . . . . ಆಪಸ್ತಂಭಸೂತ್ರದ :
51 . . . . ವ.ತ್ತಾಳುವರದರಾಜಗಳು ಆ . . . . ತ್ರದ ಗೋಪಾಲದ .
52 . . . . ಆಪಸ್ತಂಭಸೂತ್ರದಜಯ್ಯ . . . . . ಳ ಮಕ್ಕಳನರು . ಯ
53 . . . ಮಾಳಗಳು ಆತ್ರೇಯಗೋತ್ರದ ಆಪಸ್ತಂಭಸೂತ್ರದ ವೀರಣ ಪಂ
54 . . . . ನಾರ . . . . ಮಕ್ಕಳು ಅಂಣಾ . . ಗಳು ಗರ್ಗಗೋತ್ರದ ಆ
55 . . . . . ಸಿಳವ . . . . . ಶ್ರೀರಂಗರಾಜರುವತ್ಸಗೋತ್ರದ ಆಪಸ್ತಂ
56 . . . . . ಯ್ಯಂಗಳು ಯಜಮಾನವೃತ್ತಿ | ಅಯಿವತಿಬ್ಬರಯೆಂಬಾಕ ಆ
57 . . . ಮಾಂಗಳೂ . ವದ . . . ಕ್ಕಳು ಅಪ್ಪನು ಯಿವರೊಳನಾದ .
58 . ಷ್ಣವಮಹಾಜನಂಗಳಿಗೆ . . . ನಳನಹಳ್ಳಿಯ (ಯ)ಲಿ ಗೃಹನಿವೇಶನಬೆದ್ದಲೂಪರಾಂ
59 ಕುಶಸಮುದ್ರದಕೆಱೆಯಕೆಳಗಣಗದೆಮುಂತಾಗಿ ಶಂಖಚಕ್ರವಾಮನಮುದ್ರೆಯಕಲಿನ
60 ಳಗಾದಗದ್ದೆಬೆದ್ದಲು ತೋಟತುಡಿಕೆ ಅಣೆ ಅಚ್ಚುಕಟ್ಟು ಆಗಾಮಿಮುಂತಾದ ಕ್ಷೇತ್ರದ
61 ಆಸಕಲಸ್ವಾಮ್ಯವನು ನಿರುಗೆನಾಭುಸಹಿರಣ್ಯೋದಕದಾನಧಾರಾಪೂರ್ವ್ವಕವಾಗಿ ಆಚಂ
62 ದ್ರಾರ್ಕ್ಕಸ್ಥಾಯಿಯಾಗಿ ಅವರಾಗಿ ನಾಚಿಯಾಂಮನ . . . . . .
63 ಶ್ರೀವಯಿಷ್ಣವ ಮಹಾಜನಂಗಳಿಗೆಯೂ ಆಚಂದ್ರಾರ್ಕವಾಗಿ ನಡಯತಮದ





64 ರು ಕೊಟೆವಾಗಿಯಿಮಯರ್ಯ್ಯಾದಿಗೆ ಗ್ರುಹಕ್ಷೇತ್ರವೆದ್ದ ಲು ಮುಂತಾಗಿಹುನೆರ
65 ಡುವರುಷದಿಂದೊಳಗಾಗಿ ಕ್ರಯವಿಕ್ರಯಕೆಸಲ್ಲದು ಮೇಲೆಯಿದಂತ . .
66 . ಷ್ಣವ ಮಹಾಜನಂಗಳಿಗೆ ವಿಚಾರಿಸಿ ನಿಮ್ಮ ಮರ್ಯಾದೆಯು . . . . . .
67 ದಾನಪರಿವರ್ತನಕ್ಕೆ ಸಲುಉದೆಯೆಂದೂನಾಚಿಯಮ್ಮನವರು ಕುಂಬಗೆವೊಂಬ
68 ಯಿಹಜಮಾನವ್ರಿತ್ತಿ ಅಯಿವತ್ತಿಬ್ಬರುಹಂನ್ನೆರಡುಮಂದಿ ಶ್ರೀವಯಿಷ್ಣವರುಅಂತು . . .
69 ಬುಮಂದಿ ಶ್ರೀವಯಿಷ್ಣವಂಗಳಿಗೆ ನಾಉನೆಂಮಸ್ವರುಚಿಯಿಂ . . . . .
70 ವ್ಯಾಸಾಧನಯಿಮರ್ಯ್ಯಾದಿಗೆ ಸಾಕ್ಷಿಗಳು ಅಯಿವತ್ತಿಬ್ಬರು . . . . .
71 ಮಾನುಜನಬರಹನಾಚಿಯಮ್ಮನವರವೊಪ್ಪ . . . . . .
72 ಯಿವತ್ತಿಬ್ಬರವೊಪ್ಪತಿರುಮಲಯಪ್ಪ ಶ್ರೀನಾರಾಯಣ ಶ್ರೀನಾರಾಯ . .
73 ಶ್ರೀನಾರಾಯಣಾ ಶ್ರೀನಾರಾಯಣ ‖ ಗ್ರಂಥ ‖ ಸ್ವದತ್ತಾಂ ಪರದತ್ತಾಂವಾ
74 ಯೋಹರೇತವಸುಂಧರಾಂ ಷಷ್ಟಿವರುಷ ಸಹಸ್ರಾಣಿ ವಿಷ್ಟಾಯಾಂಜಾ
75 ಯತೇಕ್ರಿಮಿಃಸ್ವದತ್ತಾಂದ್ವಿಗುಣಂಪುಂಣ್ಯಂ ಪರದತ್ತಾನುಪಾಲನಂ ಪರದ
76 ತ್ತಾಪಹಾರೇಣಸ್ವದತ್ತಂ ನಿಷ್ಫಲಂಭವೇತ್ ‖ ಸಾಮಾನ್ಯೋಯಂಧರ್ಮ್ಮಸೇತು
77 ನ್ರುಪಾಣಾಂ ಕಾಲೇಕಾಲೇ ಪಾಲನೀಯೋಭವಧ್ಭಿಃ | ಸರ್ವ್ವಾನೇತಾನ್
78 ಭವಿನಃಪಾರ್ತ್ಥಿವೇಂದ್ರಾನ್ಭೂಯೋಭೂಯೋಯಾಚತೇರಾಮ
79 ಚಂದ್ರ ‖

## 87

### ಅದೇ ದೇವಸ್ಥಾನಕ್ಕೆ ಪಶ್ಚಿಮದಲ್ಲಿರುವ ಮಂಟಪದಲ್ಲಿ

1 ಸ್ವಸ್ತಿಸಮಸ್ತಪ್ರಶಸ್ತಿಸಹಿತಂಶ್ರೀಮಂಹಳೇಶ್ವರಂ
2 ಅರಿರಾಯವಿಭಾಡಭಾಷೆಗೆತಪ್ಪುವರಾಯರಗಂಡ
3 ಚತುಸ್ಸಮುದ್ರಾಧಿಪತಿಶ್ರೀವೀರಬುಕ್ಕಂಣರಾಯರವರುಪೃಥ್ವೀರಾ
4 ಜ್ಯಂಗೆಯುತ್ತಿರಲುಸಕವರ್ಷಸಾಸಿರದಯಿಂನೂ
5 ಋತೊಂಭತ್ತಎರಡುಕಲಿಯುಗಸಂವತ್ಸರನಾಲ್ಕುಸಾಸಿರ
6 ದನಾನೂಋಎಪ್ಪತ್ತೊಂದ . . . . . . . .
7 ಮೇಲೆಸಲುವಸೌಮ್ಯ . . . ಸಂವತ್ಸರದಆಶ್ವೀಜಶುಂಸೋ
8 ಶ್ರೀಮದನಾದಿಮಹಾಸ್ವಾಮಿಸ್ಥಾನಂಶ್ರೀಯಾದವ
9 ಗಿರಿಯಾದತಿರುನಾರಾಯಣಪುರದಶ್ರೀವೈಷ್ಣ
10 ವರುನಂಮಮಾಸುವಗೆಕೊಟ್ಟಶಿಲಾಶಾಸನದ
11 ಕ್ರಮವೆಂತೆಂದಡೆಶ್ರೀನಾರಾಯಣದೇವರತಿರು
12 ವೆಡೆಯಾಟದಮಯಿಲನಹಳ್ಳಿಯಕೆರೆಯಕೆಳ
13 ಗಣಕುಂಬಾಋರಕಟ್ಟೆಯಕಾಡೊಳಗುಳ್ಳಅಭೂಮಿ
14 ಮಾಸುವಗೆತಿರುವೆಡೆಯಾಟವಾಗಿನಡವಂತಾಗಿ
15 ದೇವರಅಮ್ರುತಪಡಿದೀವಿಗೆಎಂಣೆತಿರು . .
16 ತಿರುವಧ್ಯಾನತಿರುನಾಳುತಿಂಗಳುವಿಶಾಖಸಿತ್ಯಸಮಾರಾ
17 ಧನನ್ಯೆಮಿತ್ತಿಕಸಮಾರಾಧನೆನಮವಂತಾಗಿಯಿಗೆ
18 ಗದ್ದೆಬೆಂಕ್ಕೆಕಾಣಿಕೆಗೊಳಿನಶ್ರೀನಾರಾಯಣದೇವರಿಗೆಪ
19 ಡಿತರಭೂಮಿಯುಶ್ರೀವೈಷ್ಣವರುಕೊಟ್ಟುತಂಮಕ್ಕೆ
20 ಯಂಕರ್ಯವಾಗಿನಡಿಸುಉದುಯಿಧರ್ಮ
21 ಅಚಂದ್ರಾರ್ಕಸ್ಥಾಯಿಯಾಗಿಧಾರಾಪೂರ್ವಕವಾಗಿ

22 ಯಿಗಾಗದ್ದೆ ಯುತೂಸಂವಾಳಸುಗಕೊ
23 ಟ್ಟನುಶ್ರೀರಾಮಾನುಜಜೀಯುನವರ . . . .
24 . ನವಳಜೀಯುವ ಸುಶ್ರೀನಾರಾಯಣದೇವರನಾವು
25 ವಳಿಚ್ಚ ಸನೆಯುವಮಾಡುವಎಲೆನಂಬಿಯು
26 ಪರಮೋಮುಕಳು ನಂಮಾಳುವರಿಗೆ
27 . . ಕಾಣಿಕೆ ಕೊಟ್ಟಸು ಆನಂಮಾಳುವರಿಗೆ ನಾವೂ
28 . . . . . . ಗಯ್ಯನ . . . . .
29 ನಾರಣಯ್ಯನಕುಮಾರ . . . ನಂಮಾಳುವರಿಗೆ
30 . ನಕಾಣಿಕೆಕೊಟ್ಟ . . . . ವಡಮಯ್ಯನಂಮಾಳುವರಿ
31 ಗೆ . . ಗದೆ ಕಾಣಿಕೆಕೊಟ್ಟ ಅ . ಏಕಂಮಾರರಾಮೋಜನವು
32 ಗ . . ಸೋಜಗದ್ದೆ ಪ ೧ . ನಂಮಾಳುವರಿಗೆ ಕೊಟ್ಟ

## 88

### ಅದೇ ದೇವಸ್ಥಾನದ ಬಲಭಾಗದಲ್ಲಿ ನಟ್ಟ ಕಲ್ಲು

1 ಶ್ರೀಮತೇರಾಮಾನುಜಾಯನಮಃ
2 ಸ್ವಸ್ತಿಶ್ರೀಜಯಾಭ್ಯುದಯ ಶಾಲಿವಾಹನ ಸಕ
3 ವರ್ಷ ೧೪೪೭ನೆ ವ್ಯಯಸಂವತ್ಸರ . . .
. . . . . . . . . . . . . . .
6 . . ತೀರ . . . . . . . . .
7 . . ಯಾದವಗಿರಿ . . . . . . . .
8 . . . . ತಿರುನಾರಾಯಣಪುರ . . . . . .
. . . . . . . . . . . . .
11 . . . . . ರದ ಕಾಶ್ಯಪಗೋತ್ರದ
12 ಆಚಿರಾಜಅಉಭಳರಾಜ
13 ಗಳ ಮಕ್ಕಳು ವೆಂಕಟಾದ್ರಿ . . . . .
. . . . . . . . . . . . . . .
16 . . . ಮಹಾ ಅರಸುಗಳು ನಮಗೆ
17 . . . . . . . . . . . ಸರ್ವಮಾನ್ಯ
18 . . . . . . . . . . . ಸ್ಥಳದವೊ
19 . . ಗ್ರಾಮಕೆ ಪ್ರತಿನಾಮಧೇಯವಾದ ಆವುಭಳ
20 . . . . ವರಮಾನಗ್ರಾಮವನು
21 . . . ಗೆ ಧಂಮರ್ಾವಾಗಿ ಧಾರಾಪೂರ್ವಕವಾಗಿ
22 . . . . . . . . ವಾರಿ
23 . . . . . . . . . . .
24 . . . . ಗ್ರಾಮಕೆ ಸಲುವ ಚತುಸ್ಸೀಮೆ
25 . . . . ರೂಪುವಾಳಿ . . ಮಾಡಿಕೊಂಡುಯಿ
26 . . . ಗೆ ಪಡಿತರನಿತ್ಯಕೃತ . . ಆಹಾರ .
27 . . ಯುಂ ಸದವರಮಾನುಜಕೊಟ
28 ಪಾರಪತ್ತೆಗಾಹಿ ಸಹ ವರುಸ ೧ಕೆ
29 ಮೂಹಿಗಜೆಯಮರ್ದನೆಜು

30 . . . ತಿಂಗಳು ೧ಕ್ಕೆ ಗ ವ ೧೯ ॥ ವರು
31 ಷ ೧ಕ್ಕೆ ಗ ೩೧೦ ವರಹ ಸ್ವಯಂಪಾಕಿಗೆ ಗ ೬೦ . . . ವ್ರೋಳಗದ
32 ಪನ ಸಂಬಳ ಗ ೪ ಅಂತು ಗ ೬೦
33 . . . ರ ಆಉಭಳರಾಜಗೆ ಪ್ರಂಪ್ರಾತ್ಯತಿ೯ಆ
34 ಚಂದ್ರಾರ್ಕವಾಗಿ ನಡಉದು ಎಂದುಕಾಶ್ಯಪಗೋತ್ರ
35 ದ ಅಚರಾಜ ಆಉಭಳರಾಜಯನಮಕ್ಕಳು
36 ದ ವಂಕಟಾದ್ರಿರಾಜಗಳು ಕೊಟಧರ್ಮಸಾಧನ

## 95

### ಅದೇ ಗ್ರಾಮದಲ್ಲಿರುವ ನಾರಾಯಣಸ್ವಾಮಿ ದೇವಸ್ಥಾನದ ಉತ್ತರಗೋಡೆಯ ತಳಪಾದಿ ಕಲ್ಲು.

1 ಶ್ರೀಮತೇರಾಮಾನುಜಾಯನಮ ಸ್ವಸ್ತಿಶ್ರೀಜಯಾಭ್ಯುದಯ ಶಾಲಿವಾಹನಶಕ ವರುಷ ೧೪೬೬ ಸಂದ ವರ್ತಮಾನವಾದ ಮನ್ಮಥಸಂವತ್ಸರದ ಆಷಾಢ ಶು ೧೧ ಲೂ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀವೀರಪ್ರತಾಪ ಶ್ರೀವೀರ ಅಚ್ಯುತಯ್ಯ ದೇವಮಹಾರಾಯರು ಪೃಥ್ವೀರಾಜ್ಯಂಗೈಉತ್ತಮಿರಲು ಶ್ರೀಮದನಾದಿಮಹಾಸ್ವಾಮಿಸ್ಥಾನಂ ಭೂಲೋಕ ವೈಕುಂಠ ವೈಕುಂಠವರ್ಧನಕ್ಷೇತ್ರ ಜ್ಞಾನಮಂಟಪ ಪರಾಭಿಧಾನ ದಕ್ಷಿಣಬದರಿಕಾಶ್ರಮ ಶ್ರೀಯಾದವಗಿರಿಯಾದ ತ್ರಿರು ನಾರಾಯಣಪುರವಾದಶ್ರೀಸಂಪತ್ಕುಮಾರನಾರಾಯಣದೇವರು ಶ್ರೀ ಚೆಲುಪಿಳರಾಯರ ಶ್ರೀಭಂಡಾರಕ್ಕೆ ಕಾಶ್ಯಪಗೋತ್ರದಸಿಂಧುಗೋವಿಂದ ಶಿತಕರಗಂಡ

2 ಧವಳಂಕಭೀಮಮಣಿನಾಗಪುರವರಾಧೀಶ್ವರ ಸ್ವರ್ಗ ಮರ್ತ್ಯ ಪಾತಾಳ ತ್ರಿಭುವನಿ ಕತಾರಿರಾಯರಾದ ಉದಯಗಿರಿಯ ಹರಿನೀಲ ಅಬ್ಬರಾಜಗಳ ಮಕ್ಕಳೂ ತಿರುಮಲರಾಜಗಳೂಸ . . (ಮೆಟ್ಲು ಹೊಸದಾಗಿ ಕಟ್ಟಿಧಾರೆ) . . . . ಳಗೆ ಪಾಲಿಸಿದ ನಾಗಮಂಗಲದಲ್ಲಿ ಪೂರ್ವ ತಾಂಬ್ರ ಶಾಸನಸ್ಥವಾದ ಸಟಿಪುರ ಮಾಲನಹಳಿಯಿಮಕೆಸಲುವ ಕಾಲುವಳಿಗಳೂ ನಿಲಮಂಗಲ ಹೊಳವಳ್ಳಿ ಕರನಾರನಹಳಿ ಸಹ ಗ್ರಾಮ ಆಯಿದನೂ ರಾಮಾಭಟರ ಕೈಯಿಂದ ಬಿಡಿಸಿಕೊಂಡು ನಾಂಮಧರ್ಮವಾಗಿ ಶ್ರೀಚೆಲುಪಿಳರಾಯರಿಗೆ ನಿತ್ಯಸಂದಿ ತೆಪ್ಪ ತಿರುನಾಳು ಚಪ್ಪು ತ್ರಿರುನಂದಾವನ ಮೊದಲಾದ ಕೈಂಕರ್ಯದ ಶಿಲವಾಗಿ ಸಹಿರಣ್ಯೋದಕದಾನಧಾನ ಧಾರಾಪೂರ್ವಕವಾಗಿ ನಿಮಿಗೆ ಸಮರ್ಪಿಸಿದೆವಾಗಿ ಆ ಕೈಂಕರ್ಯಗಳ ದನಗಟ್ಟಳೆಯ ವಿವರ ಪ್ರತಿದಿನ ೧ಕ್ಕೆ ನಡವ ನಿತ್ಯಸಂಧಿ ೧ಕ್ಕೆ ಅಮೃತಪಡಿ ಖಂ | ೧ಕೆ ತಳಿಗೆ ೬ ಅರ್ಧಪರಪಮುದಾಕ ಅರಿಯುಮದನ್ನೆಯಮಡುಚುರುಳಮದುಸಹ ವರ್ಷ ೧ಕೆ ಸಲುವುದು ಗ ೩೬ ವರಹ ತೆಪ್ಪತಿರುನಾಳಿಗೆ ನಾಉ ಹೊಸ್ತಾಗಿ ಕಟ್ಟಿಸಿದ ತೆಪ್ಪಕೊಳದ ಮಂಟಪಕೆ ಸ್ವಾಮಿಬಿಜಯಮಾಡುವ ತೆಪ್ಪ ತಿರುನಾಳಬಿನ ೩ಕೆ ಚಪ್ಪುಕಟ್ಟಳೆ

3 ಸಹ ಸಲುವುದು ಗ ೪೮ ವರಹ ಪ್ರತಿದಿನವೂ ತಿರುಪಡಿಮಾಳ ಸಮರ್ಪಿಸುವ ನಂದಾವನ ಮಾಡುವ ಸಂಬಳ ೬ ವರಹ ಅಂತೂ ಗ ೧೩೦ ವರಹಧರ್ಮವನು ಅಚಂ (ಮೆಟ್ಲು ಹೊಸದಾಗಿ ಕಟ್ಟಿಧಾರೆ) ಉಳಿದ ಒಂದು ತಳಿಗೆ ಪ್ರಸಾದವನೂ ಶ್ರೀ ಮಧ್ಯಸುದರ್ಶನಾಚಾರ್ಯರಾದ ಪೆರಂಗೂರವರದರಾಜಯನವರಿಗೆ ಧಾರಾಪೂರ್ವಕವಾಗಿ ಕೊಟ್ಟೆವಾಗಿ ಅವೊಂದು ತಳಿಗೆಯ ವರದರಾಜ್ಯೆಯನವರಿಗೆ ಸಲುವುದು ಹಿಂದಕೆ ಸಂಮತಂಮಪೇಟ ರಾಜಯ ಕೇಟಿಯ ಕಟ್ಟಿಸಿಮಾಡಿದ ನಿತ್ಯಸಂಧಿ ೮ ೪ ಮಯಿಲಹಳಿಯ ಸಂಮಂಧ ನಿತ್ಯಸಂಧಿ ಖಂ | ೧ ಉಭಯಂ ಖಂ ॥ ೧ ಕೊಳಗೆ ಅಮೃತಪಡಿಯನು ನೈವೇದ್ಯವನೂ ಉದಯವಾದ ಪಸಿಯ ತಳಿಗೆಯೂ ಶ್ರೀ ಚೆಲಪಿಳರಾಯರೂ ಆರೋಗಣೆಯ ಚಿ . ತ . ಯಿಾನಿ ಆ ಪ್ರಸಾದವನೂ ಸಾನವಾಸಿ ಸಲುವ ತಳಿಗೆ ಏಳು . . . . ಳಗೆಯನುಳಿದು ನಂಮರಾಜಮಾನ್ಯ ಅಂಶಕೆ ಸಲುವ ಪ್ರಸಾದ ಮೂಱು ತಳಿಗೆಯು ಶ್ರೀಮಧ್ಯಸುದರುಶನಾಚಾರ್ಯರಾದ ಪೆರಂಗೂರ ವರದರಾಜಯನವರಿಗೆ ಪುತ್ರಪವುತ್ರ ಪರಂಪರೆಯಾಗಿ ಸಲುವುದು | ಈ ಸ್ಥಾನದ ಅಧಿಪತಿಬರೂ ಒಪ್ಪಿ ಬ ಸಿದವಿವರರಾಜಕದೈವಿಕವಾದರೂ ಈ ಕೈಂಕ

## 96

### ಅದೇ ದೇವಸ್ಥಾನದ ಬಾಗಲಲ್ಲಿ ಪಶ್ಚಿಮಕಡೆ ನಟ್ಟ ಕಲ್ಲು.

1 ಶ್ರೀಮತೇರಾಮಾನುಜಾಯನಮಃ | ಸ್ವಸ್ತಿಶ್ರೀವಿಜಯಾ
2 ಭ್ಯುದಯ ಶಾಲಿವಾಹನ ಶಕವರುಷ ೧೪೬೮ ಸಂದುವ

3 ರ್ತಮಾನವಾದ ಪ್ಲವಂಗಳ ಸಂವತ್ಸರದ ವಯಿಶಾಖ ಶುಧ
4 ೧೫ ಗು ಶ್ರೀಮದನಾದಿ ಮಹಾಸ್ಥಾನಂ . . .
. . . . . . . . . . . .
7 ಯಾದವಗಿರಿಯಾದ ತಿರುನಾರಾಯಣಪುರ . .
(ಈ ಮಧ್ಯೆ ಸುತರಾಂ ಕಾಣುವದಿಲ್ಲ.)
20 . . . . . . . . . . . . . . ಯನವರು
21 . . . . . . . . . ರಾಯಸ . . ರಾದ ಶ್ರೀ ನಾ
22 ಗ್ರಯ್ಯನವರ ಕಾರ್ಯಕ್ಕೆ ಕರ್ತರಾದ ಕಡವೂ
23 ರ ಕಾವೆಯ್ಯನವರಿಗೆ ಪಾಳಿನ ೭ . ನೂ
24 ಕಟ್ಟುವಮಾಡಿದವರಿಗೆ ನಾಲುಪಾಳಿ ೩೦ ವಕ್ಕ .
25 . . . .  . . ಆಪ . . ವನೂಕಿತುದರು
26 . ಳ ಸೀಮೆಯ . . . . . . . . ದಯಿಶಾ .
27 . . . . . ಗಿ . . . . . . ವಲಿ ಮಾಡಿದೆವಾ
28 . . . . . . . . ಗಂ . ಸರವರ . . ದ .
29 . . . . . . . . . . . ಮಕ್ಕಳ .
30 ಯ . . . . ಅಕಲ ಹಳದಲು . .
31 . . ಮೂಡಕೆಯ ಯೆಕಸವರು ಆಚಾರ್ಯ .
32 ಆಗ್ರಾಯಲಿ ನಡೆಯಲುಳವರು ನಂಮ ನಾವು
33 . ಅ . ಯೊಂದು . . . . . . ಆ ಕಾಲು
34 . . . . ವಾ ನಡಿಯಲಿ . . . . ಗಿದು ಕೂ
35 . . ಉಳವರು . . . . . . ಆಚಾರ್ಯ
36 . . . ಯಕ್ರಮ ತಿರುಪಾತ . ಸರಹಳಿಯ
57 . . . ಗಳು ಯಲರನೂ ಕೂಡಿಕೊಂಡು ಮಾಡಲುಳ
38 ವರುವೆಚಾವಮಾಡಸಲು ಮಾ . . . ಸಹವಿನ
39 .  . ಯಪಅಲಾಳ . . . . . . .
40 . . . . ವಿವರ . . . . ಹಾಜನ
41 ಗಳೊಳಗಾಗಿವಯಿ . . . . ಯ ಹೋಪ .
42 . . . . . ಡಿಕೆ ಸಹಿತ ಆಚಾರ್ಯ . .
43 . . . . . ನಲು ಉಳವರು . . . .
44 . . . . ಉಳವರು ಯೆಂ . . . .
45 . . . . . . . . . .

## 99

### ಅದೇ ಗ್ರಾಮದ ಎತಿರಾಜಮಠದಲ್ಲಿ ನೆಲದಲ್ಲಿರುವ ಶಾಸನ.

1 ಶ್ರೀಮತೇರಾಮಾನುಜಾಯನಮಃ
2 ನಳಸಂವತ್ಸರದ ಮಾರ್ಗಶಿರ ಶು ೧೩
3 ಗುರುವಾರದಲು ಶ್ರೀ ವಯಿಕುಂಠ
4 ವರ್ಧನ ಕ್ಷೇತ್ರದಲು ನೆಲಸುಹದು
5 ನಾರಾಯಣದೇವರ ಸಿರುಪರಿ
6 ಂದ ಅಯಿವತಿಬರೂ ತೆರಕ
7 ಸಾಂಬಿಯ ಚೆನಪಶೆಟ್ಟಿಯರ
8 ಮಕಳು ಅಳಗಿಯ ಮಳವಾಳ ದಾಸ
9 ರಾದ ಕೇತಿಮಪ್ಪ ಸೆಟ್ಟಿಯರು
10 ರಾಮಾನುಜಕೂಟಕೆ ಬಿಟ್ಟಗ್ರಾ
11 ಮ . . . . ವರಹಳ ೧ ಕಾಮರಸಪ್ರ
12 ರ ೧ ಅಂತು ಗ್ರಾಮ ೨ ಹರಹಿನಕೇತ

## 101

13 ನ ಹಳಿಯಲು ಗದೆ ಬ ೩೯ ಯಿಪ್ಪಟ್ಟ
14 ನ್ಯೊ . . ಮಾಡಿಕೊಂಡು . ನಾ
15 ಲ್ಕ . . ಶ್ರೀವಯಿಷ್ಣವರು ಅವು
16 ದರ್ಶನಕೆ ಕಟ್ಟಳೆಯನೂ ಭಷ
17 ಶಾಖಿರ ಸಂನಿಧಿಯಲಿ ನಡಶಿಬಹೆ
18 ಉ ಎಂದು ಬರೆಶಿ . . ಲಾಸಾ
19 ಧನ

ಅದೇ ಗ್ರಾಮದ ಚಿಕ್ಕಯ್ಯನಕೊಳದ ಉತ್ತರ ಕುಯಲಿನ ಪಶ್ಚಿಮಭಾಗದ ದವಡೆಗಟ್ಟಿನ ಕಲ್ಲು

1 ಶ್ರೀಮತೇರಾಮಾನುಜಾಯನಮಃ ಶ್ರೀಮತ್ತುರಲುದ್ರಿ ಸಂವ
2 ತ್ಸರದ ಫಾಲ್ಗುನ ಶುದ್ಧ ೩೯ ಲೂ ಅಚಾರಿಬಿಳ್ಳೆ ಅಪ್ಪಯ್ಯಂಗಾರಯ್ಯನ
3 ವರ ಶಿಷ್ಯರು ಮರದೂರ ಲಕ್ಷ್ಮಣಯ್ಯನವರ ಮಕ್ಕಳು ಚಿಕ್ಕಯ್ಯನ
4 ವರು ಕಟ್ಟಸಿದ ಕೊಳ ||

## 102

ಅದೇ ಗ್ರಾಮದಲ್ಲಿ ಕಾಲವೇಘ ಸಿಂಗಲಾಚಾರ ಮನೆ ಜಗತಿಗೆ ನಟ್ಟ ಕಲ್ಲು.

(ಮೇಲ್ಭಾಗ ಸವೆದು ಹೋಗಿದೆ.)

1 . . . ನ್ಮಹಾರಾಜಾಧಿರಾಜ ರಾಜಪರಮೇಶ್ವರ . . . . . . . .
2 . ಪೃಥ್ವೀರಾಜ್ಯಂಗೆಯುತ್ತಮಿರಲು . . . . . . . . . .
3 ವರ್ಧನಕ್ಷೇತ್ರಜ್ಞಾರಮಂ . . . . . . . . .
4 ಭಿಧಾನಂ ಶ್ರೀಯಾದವಗಿ . . . . . . . . . . .
5 ರಾಯಣಪುರದ ಸಂ . . . . . . . . . . .
6 . ಯ್ಯತ್ತಿಬ್ಬರು ಶ್ರೀವೈಷ್ಣವ . . . . . . . .
7 . ಮನು . . . . . . . . . . . .
8 . ಹುತರಾಯ ಎಡತಲಿ . . . . . . . . . . .
9 ವಾಗಿಕೊಟ ಕ್ರಯಶಾಸನ ಪ್ರಮಾಣ . . . . . . .
10 . ದ ಬಿರಾವ್ರ ಶ್ರೀಮುದ . . ಗ . . . . . . . . . .
11 ವರ್ತ್ತಿ ಹೊಯ್ಸಳ ಭುಜಬಲವೀರ . . . . . . . .
12 . ಕಯ್ಯಾಲು ಧಾರಾಪೂರ್ವಕವಾಗಿ . . . . . . . . .
13 . ನಾರಾಯಣಪುರವನು . . . . . . . . . .
14 ನಾರಾಯಣ ಪೆರುಮಾಳತಿರಿ . . . . . . . . .
15 ಚ್ಚವಡಿಗಿರಿಯೊಂದನು . ಯುಲದ . . . . . .
16 ಯೆಂನೆಸತು . . . . . ನ ದೇವರಿಗೆ . . . . . . . .
17 . ಉಚ್ಛವಾದಿ ಸಕಲ . ಪ್ರೋಂನಗದ . . . . . . .
18 . ಮೊದಪರಣ್ನಯ್ಯಾ ಕಯ್ಯಾಲು . . . . . . . . .
19 . ಜನಂಗಳು . . . . . . . . . . . .
20 ಸಲ್ಲಿಕೊಂಡು ಆಜಮೇಳಗೆ . . . . . . .
21 . . ಸಳಿ . . . . . . . . . . . . .
22 . . ತರಾಯ . ತಿ . . . . ಯಾಗಿ . . . . .
23 . ವೈಷ್ಣವ ಮಹಾಜನಂಗಳು ಮಾಡಪ . . . . . .
24 . ಗನುಕೊಟ್ಟ ಕ್ರಯಶಾಸನಪ್ರಮಾಣ . . . . .
25 ಸಂವತ್ಸರ . . . ಶ್ರೀವೈಷ್ಣವ ಮಹಾಜನಂಗ
26 ಳಸ್ವಹಸ್ತ . . ಶ್ರೀ ನಾರಾಯಣ .

## 106

ಅದೇ ಗ್ರಾಮದ ದಾಖಲೆ ಹೊಸಹಳ್ಳಿ ಗ್ರಾಮಕ್ಕೆ ದಕ್ಷಿಣದಲ್ಲಿ ದಾಸಸೆಟ್ಟಿ ಹೊಲದಬಳಿ ಬಿದ್ದಿರುವ ಕಲ್ಲು

1 ಶುಭಮಸ್ತು ಶ್ರೀಮ
2 ತು ವೀರಪ್ರತಾಪ ಮಹಾ
3 ಬಳರಾಯರನಿರುಪದಿಂ
4 ದ ದೇವರಸರು ತಂಮುಧರ್ಮ
5 ವಾಗಿ ಶ್ರೀ ಚೆಲುಪಿಳೆರಾಯ
6 ರಿಗೆ ನಂದಾದೀವಿಗೆನಡವ
7 ದಕ್ಕೆ ದೇವರ ದಂಡನಾಯಕ
8 ಹೊಸಹಳಿಯ ಸುಂಕವ
9 ರ್ತಗರ ಸುಂಕ ಬಳಿವಾಚಿ
10 . . . ಚಿಕ್ಕರಸಾಮಮೊ
11 ದಲಾ . . ಮನೆಯ ಬಿಟ್ಟೆವಾ
12 ಗಿಯಿಟ್ಟನು ಆಚಂದ್ರಾರ್ಕಸ್ಥಾಯಿ
13 ಯಾಗಿ ರಾಮರ್ಸರು ಕೊಟ .
14 . . ಯಿಧರ್ಮವನು ಮಂ .
15 . . . ಗೆ ತಡೆಯಲಿಸದೆ . .
16 . . . . ತಮ ತಾಯಿತಂದೆ . .
17 . . . ತ್ತಿಯನು . . . .
18 . . . . . . . . . . .

## 125

ಕಿರಂಗೂರು ಹೋಬಳಿ ಕಿರಂಗೂರಲ್ಲಿರುವ ರಾಮದೇವರ ದೇವಸ್ಥಾನದ ಉತ್ತರ ತಳಪಾದಿ ತುಂಡು ಕಲ್ಲು

1 ತನಂ ಗಾಡಿಯಾದ ಪಂಚನ ಮಾರಾಯನಾಟ ರಾಜೇನ್ದ್ರ ಚೋಳ ಮಣ್ಡರಯನ್ನಮ್ಮರಗಳಮಾಡಿಸಿದ
2 ತೆಂಕನಾಡಿಂ ಆಗ್ನೇಯಸ್ಯಾನ್ದಿಶಿ . . . . . . . . . ನ್ಯಾನ್ದಿಶಿನೆ . . .

## 149

ಚಂದಗಾಲ ಹೋಬಳಿ ಮೇಳಾಪುರ ಗ್ರಾಮದಲ್ಲಿ ಮಾರೀಗುಡಿಯ ಪೂರ್ವದಿಕ್ಕಿನ ಗೋಡೆಗೆ ಪೂರ್ವಾಭಿಮುಖ ಬರೆಗಿಸಿರುವ ಕಲ್ಲು.

ಪ್ರಮಾಣ—7′ × 1′3″

1 ಶುಭಮಸ್ತು ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾ
2 ಹನ ಶಕವರುಷ ೧೪೮೭ನೆಯ ಕ್ರೋಧನ ಸಂವತ್ಸರದ
3 ಜೇಷ್ಟ ಶು ೧೦ ಲೂ ಶ್ರೀಮಂನ್ಮಹಾ ರಾಜಾಧಿರಾಜ ರಾಜಪ
4 ರಮೇಶ್ವರ ಶ್ರೀ ವೀರಪ್ರತಾಪ ಶ್ರೀ ಸದಾಶಿವದೇವ ಮಹಾರಾಯ
5 ರು ಪ್ರಿಥ್ವೀರಾಜ್ಯಂಗೆಯಿ ಉತ್ತಂ ಯಿರಲು ಕಂದಾಚಾರ
6 ದನಂಜಯ ತಿಂಮಪ್ಪಗಳೂ ಶ್ರೀ ದೇವಾಧಿದೇವ ಸರ್ವೋ
7 ತಮ ಶ್ರೀ ತಿರುವೆಂಗಳನಾಥದೇವರ ಭಂಡಾರಕೆ ಸಮರ್ಪಿಸಿ
8 ದ ಗ್ರಾಮ ಶಿಲಾಶಾಸನದ ಕ್ರಮವೆಂತೆಂದರೆ ನಮಗೆ ಅಮರ
9 ಮಾಗಣಿಗೆ ಸಲುವ ಶ್ರೀರಂಗಪಟ್ಟಣದ ಸೀಮೆಯೊಳಗಣ ಮೇ
10 ಳಾಪುರ ಗ್ರಾಮವನೂ ಸಮರ್ಪಿಸಿದೆವಾಗಿ ಆಗ್ರಾಮಕೆ ಸಲುವ ಹ
11 ಬಾಡಿಯ ಗ್ರಾ ೧ ದಂಡಗನಹಳಿಗ್ರಾ ೧ ಬೇಡರಹಳಿ ಗ್ರಾ ೧
12 ಅಂತು ಗ್ರಾಮ ೪ ನೂ ಶ್ರೀತಿರುವೆಂಕಟನಾಥದೇವರ ಶ್ರೀ
13 ಭಂಡಾರಕೆ ನಾಉಧಾರಾಪೂರ್ವಕವಾಗಿ ಕೊಡುವಕಾಲ
14 ದಲಿ ಮೊದಲು ಏಕಾಂತ ರಾಮಾನುಜೀಯರಿಗೆ
15 ಉಂಬಳಿಯ ಕೊಡುವದಕೆ ಮೊದಲು ಸಲುವಂತಾ
16 ದೇವದಾಯ ಬ್ರಂಹ್ಮದಾಯಗಳನೂ ಜೀಯರು ಬಿಳಿಂಗ
17 ತವಾಗಿ ಕಟಕೊಂಡ ಯಿರಲಾಗಿ ನಾಉವಿಚಾರಿಸಿ ಆ
18 ಜೀಯರು ಕಟ್ಟಿಕೊಂಡ ಮಾನ್ಯಗಳನೂ ಬಿಟ್ಟು ಕೊಟದ್ದು

19 ಪೂರ್ವದಲಿ ನಡದಂಥಾ ದೇವದಾಯ ಬ್ರಂಹ್ಮದಾಯ
20 ಗಳ ಸರ್ವಸ್ವಾಂವ್ಯಗಳನು ಬಿಟ್ಟು ಪ್ರಭುಗೂಡಗೆ ಗ
21 ಉಡುಗಳೂ ಗ್ರಾಮದ ಸೇನಬೋವನ ಕೊಡ
22 ಗಿ ಮುಂತಾದ ಮಾಂನ್ಯಗಳನೂ ಸರ್ವ್ವಮಾಂನ್ಯವಾಗಿ।
23 ಬಿಟ್ಟು ನಂಮ ಅರಮನೆಗೆ ಸಲುವ ಗದ್ದೆ ಬೆದ್ದಲುತೋಟ
24 ತುಡಿಕೆ ಸುಂಕ ಸುವರ್ನಾದಾಯ ಮಗ್ಗ ಮನೆ ವಣಕುರಿ
25 ದೆರಯಿಲು ಮುಂತಾದ ಸಕಲ ಸ್ವಾಂವ್ಯವನು ನಾಉ
26 ಹಿರಿಯ ತಿರುವೆಂಗಳನಾಥದೇವರ ಶ್ರೀ ಭಂಡಾರಕೆ ಅಚಂ
27 ದ್ರಾರ್ಕಸ್ತಾಯಿಯಾಗಿ ಧಾರಾಪೂರ್ವಕವಾಗಿ ಸಮರ್ಪಿಸಿದೆ
28 ಉ ಯೆಂದು ಕೊಟ್ಟ ಗ್ರಾಮ ಶಿಲಾಶಾಶನ ಯಿದಕ್ಕೆ
29 ಅವನಾನೊಬನು ಅಳುಹಿದವನು ಪಂಚಮಹಾ
30 ಪಾತಕಿಯಹನು ದಾನಪಾಲನಯೋರ್ಮಧ್ಯೇ।
31 ದಾನಾತ್ಶ್ರೇಯೋನುಪಾಲನಂ ದಾನಾತ್‌ಸ್ವರ್ಗಮ
32 ವಾಪ್ನೋತಿಪಾಲನಾದಚ್ಯುತಂಪದಂ ಶ್ರೀ ಶ್ರೀ

## 152

ಹಿರೋಡೆ ಹೋಬಳಿ ತೊಣ್ಣೂರು ಗ್ರಾಮದ ನಾರಾಯಣಸ್ವಾಮಿ ದೇವಸ್ಥಾನದ ಪೂರ್ವದಿಕ್ಕಿನಲ್ಲಿರುವ ಕಲ್ಲು.

ಪ್ರಮಾಣ—3′6″ × 1′8″

(ಮುಂಭಾಗ)

1 ಸ್ವಸ್ತಿಶ್ರೀಮನ್ಮಹಾಮಂಡಳೇಶ್ವರಂ
2 ಶ್ರೀವಿಷ್ಣುವರ್ಧನಭುಜಬಳವೀರಹೊ
3 ಯಿಸಳಬಲ್ಲಾಳದೇವರುದೋರಸ
4 ಮುದ್ರದರಾಜಧಾನಿಯುಲುಸುಕ
5 ಸಂಕಥಾವಿನೋದದಿಂಪ್ರಥಿವೀರಾಜ್ಯಂ
6 ಗಯ್ಯುತ್ತಿರಲುಸ್ವಸ್ತಿಶ್ರೀಮ
7 . ಹಾಪ್ರಧಾನಂಸರ್ವ್ವಾಧಿಕಾರಿಸೇ
8 ನಾಧಿಪತಿಮಹಾಪಸಾಯ್ತಂದಂ
9 ಡನಾಯಕಂಜ್ಯೋತಿಮಯ್ಯಗ
10 ಗಳುದಂಡನಾಯಕಬಲಯ್ಯಗ
11 ಳುಯಾದವಗಿರಿಯಕೋಟೆಯ
12 ರಕ್ಷಾಪಾಳಕರಾಗಿರಕ್ಷೆಸುತ್ತಿರ್ಪ್ಪ
13 ಲ್ಲಿಯುವರಮಕ್ಕಳುಸೀಲಯ್ಯಗ
14 ಳುಚಾಮಯ್ಯಗಳುಕೋಟಿ
15 ಯಹುಲಿಗಾಹುಆವಿತ್ತಿಯ
16 ನುಂಚಿಳುದ್ದುಸೌಮ್ಯಸಂವತ್ಸ
17 ರದಶ್ರಾವಣಸುದ್ಧಪೌರ್ನ್ನಮಿ
18 ಸೋಮವಾರಭ್ಯತೀಪಾತದಂ

(ಹಿಂಭಾಗ)

19 ತೊಂಡನೂರಗ್ರಹಾರದಅಗಡಿ
20 ಯನಖರೇಸ್ವರದೇವರನಂದಾ
21 ದೀವಿಗೆಗೆಸಲುವಂತಾಗಿಆರಾ
22 ಧನಅಮಿತ್ರಪಡಿಸ್ತಾನಾಪತಿಯು
23 ಕಯ್ಯಲುಚಂದ್ರಾರ್ಕ್ಕಸ್ತಾಯಿಯಾ
24 ಗಿಧಾರಾಪೂರ್ವ್ವಕವಮಾಡಿಬಿಟ್ಟ
25 ದತ್ತಿಚಂಡಿಯಬಸಿಜೆರ . . . .
26 ಆಸಂವತ್ಸರದಲುಮಗ್ಗದೆಜೆ
27 ಯೊಳಗದೇವರನಂದಾದೀವಿಗೆ
28 ಗೆನಾಗಂಣ್ಣನಬೆಸದಿಂಅಯ
29 ತಪಗ್ಗಡೆದಾರಾಪೂರ್ವ್ವಕ
30 ಮಾಡಿಬಿಟ್ಟಮಗ್ಗ
31 ಬಂದುಂಅದಪೂಯಂದ
32 ಲುನಖರಂಗಳುಬಿಟ್ಟಸೆಟ್ಟಿಯ
33 ೞನಖರೇಸ್ವರದೇವರಿಗೆಸ್ವ
34 ದತ್ತಂಪರದತ್ತಂವಾ
3 ಯೋಶ . . . ಸು ಧರಾ । ಷಷ್ಟಿ
36 ವರುಷ . ಹಸ್ರಾಣಿವಿ
37 ಷ್ಟಾಯಾಂಜಾಯತೇಕ್ರಿ
38 ಮಿಃ ॥

## New Inscriptions.

### ಹೊಸ ಶಾಸನಗಳು.

## 161

ಶ್ರೀರಂಗಪಟ್ಟಣದ ಕಸಬಾ ರಂಗನಾಥಸ್ವಾಮಿ ದೇವಸ್ಥಾನದ ಗರ್ಭಗೃಹದ ಹೊರಗೋಡೆ ದಕ್ಷಿಣ ತಳಪಾದಿ ಕೆಳಪಟ್ಟಿಯಲ್ಲಿ

ಗ್ರಂಥ ಮತ್ತು ಅರವಕ್ಷರ.

## 162

ಅದೇ ದೇವಸ್ಥಾನದ ಒಳಪ್ರಾಕಾರದ ಪಶ್ಚಿಮಗೋಡೆಯ ವಾಯುವ್ಯಮೂಲೆ ಚಪ್ಪಡಿಯ ಮೇಲೆ

1 . . . . . . ನಾರಾಯಣ ಗೋವಿಂದ | 2 . . . . . ತಿರುಮಲಯ್ಯ

## 163

ಅದೇ ದೇವಸ್ಥಾನದಲ್ಲಿ ಧ್ವಜಸ್ತಂಭಕ್ಕೆ ಪೂರ್ವ ಚತುರ್ವಿಂಶತಿಕಂಭಗಳಲ್ಲಿ ಬಲಗಡೆ ಕಂಭದ ಮೇಲೆ

(ಪಶ್ಚಿಮ ಮುಖ)
(ಮೇಲೆ) ಹರಿ
(ಮಧ್ಯೇ) ನರಸಿಂಹ
(ಕೆಳಗೆ) ಪ್ರದ್ಯುಮ್ನ

(ಉತ್ತರ ಮುಖ)
(ಮೇಲೆ) ಶ್ರೀಕೃಷ್ಣ
(ಮಧ್ಯೇ) ಅಚ್ಯುತ
(ಕೆಳಗೆ) ಅನಿರುದ್ಧ

(ಪೂರ್ವ ಮುಖ)
(ಮೇಲೆ) ಜನಾರ್ಧನ
(ಮಧ್ಯೇ) ಪುರುಷೋತ್ತಮ
(ಕೆಳಗೆ) ಸಂಕರುಷಣ

(ದಕ್ಷಿಣ ಮುಖ)
(ಮೇಲೆ) ಉಪೇಂದ್ರ
(ಮಧ್ಯೇ) ಅಧೋಕ್ಷಜ

## 164

ಅದೇ ಸ್ಥಳದಲ್ಲಿ ಎಡಗಡೆ ಕಂಭದ ಮೇಲೆ

(ದಕ್ಷಿಣ ಮುಖ)
(ಮೇಲೆ) ಶ್ರೀಧರಾತ್ಮರು

(ಮಧ್ಯೇ) ಮಧುಸೂದನ
(ಕೆಳಗೆ) ನಾರಾಯಣ

(ಪೂರ್ವ ಮುಖ)
(ಮಧ್ಯೇ) ವಿಷ್ಣು

## 165

ಅದೇ ದೇವಸ್ಥಾನದಲ್ಲಿರುವ ದೊಡ್ಡ ಬೆಳ್ಳಿಬಟ್ಟಲಿನ ಮೇಲೆ

1 ಟೀಪೂಸುಲತಾನಪಾಛಾರವರ ಧರ್ಮ | 2 ಶ್ರೀ ಕೃಷ್ಣ

## 166

ಅದೇ ದೇವಸ್ಥಾನದ ಇನ್ನೂ ಮೂರು ಬೆಳ್ಳಿಬಟ್ಟಲುಗಳ ಮೇಲೆ

ಟೀಪೂಸುಲತಾನಪಾಛಾರವರ ಧರ್ಮ

## 167

ಅದೇ ದೇವಸ್ಥಾನದ ಬೆಳ್ಳಿಪಂಚಾರತಿಯ ಮೇಲೆ

1 ಕಳಲೆ ಕಾಂತೈಯನ ಶೇವೆ | 2 ದಂಡಿಸಹಾ ತೂಕ ರು ೧೬॥೦ | 3 ಟೀಪೂಸುಲ್ತಾನ್‌ಪಾಛಾರವರ ಧರ್ಮ





## 168

### ಅದೇ ದೇವಸ್ಥಾನದ ಸಹಸ್ರಧಾರೆ ಬೆಳ್ಳಿತಟ್ಟೆಯ ಮೇಲೆ

ನಾಗರಾಕ್ಷರ.

1 ೧೧ ಶ್ವಕೆ ೧೬೪೧ ಪ್ರಮಾರಥಿನಾಮಸಣಭೇಟ್ | 2 . ೧ ಮಹಂತಖೀಜಮೆಗೀರಜೀ

## 169

### ಅದೇ ದೇವಸ್ಥಾನದಲ್ಲಿ ಶ್ರೀರಂಗನಾಯಕಿಯವರ ಗುಡಿಯಲ್ಲಿರುವ ಮೂರು ಬೆಳ್ಳಿಬಟ್ಟಲುಗಳ ಮೇಲೆ

1 ಕಳಲೆ ಕಾಂತೈಯ್ಯನವರ ಶ್ಯಾವೆ | 2 ಟೀಪೂಸುಲತಾನಪಾಛಾರವರ ಧರ್ಮ

## 170

### ಅದೇ ಗುಡಿಯ ಮತ್ತೊಂದು ಬಟ್ಟಲಿನ ಮೇಲೆ

ಮೊದಲುಸ್ವಾಂವ್ಯದ ರಂಗಪತ್ತಿಶ್ರೀರಂಗರಾಜರ ಕೈಯ.ರಿಕಬ್ಯ ರೂಪಾಯಿ ೪೪

## 171

### ಅದೇ ಗುಡಿಯ ಬೆಳ್ಳಿಗಿಂಡಿಯ ಮೇಲೆ

ಶ್ರೀರಂಗನಾಯಕಿಗಾರಿಸಂಸಿದಿಯಂದು ಶ್ರೀರಾಮಾನುಜಪರಕಾಲಸ್ವಾಮಿಲವಾರಿ ಕೈಯಂಕರ್ಯಂ ॥

## 172

### ಅದೇ ಗ್ರಾಮದಲ್ಲಿ ಗಂಗಾಧರೇಶ್ವರ ದೇವಸ್ಥಾನದ ಪೂರ್ವದಿಕ್ಕಿನ ಒಳಬಾಗಿಲ ಉತ್ತರಕಡೆ ೧ನೆಯ ಅಂಕಣದ ನೆಲದ ಮೇಲಿನ ಸವಡ ಭಿತ್ತಿಯ ಕಲ್ಲಿನಲ್ಲಿ

1 ಸ್ವಸ್ತಿ ಶ್ರೀವಿಜಯಾಭ್ಯುದಯಶಾಲಿವಾಹನಶಕವರುಷ . . . . . . . . . ಸಾ

2 ವರಿಸಂವತ್ಸರದ ವಯಿಶಾಖ ಶು ೧೫ . . . . . . . ಶ್ರೀಮನ್ಮಹಾದೇವದೇವೋತ್ತಮ ಶ್ರೀಗಂಗಾ

3 ದರೇಶ್ವರದೇವರ ಶ್ರೀಪಾದಕ್ಕೆ ಕಾರಗನಹಳಿಯ ವೀರವೊಡೇರ . . . . ಜೆಯರಾಜನೂ ಧಾ

4 ರಾಪೂರ್ವಕವಾಗಿ ತನಗೆ ಧರ್ಮವಾಗಬೇಕೆಂದು . ಹ ಕ್ಷಮಿ . . . ಮೃಗತೀರ್ಥದಲ್ಲಿ ಕಟಿಸ್ತ

5 . ಂತದಮಂಟಪದ ಚೆಪಿಗೆ ಮಾಡಿದ ಸ್ವಾಸ್ತಿ ವಿವರಾ ಗಂಗಾಧರೇಶ್ವರ . . ಸ್ವಾ . . ಂಗೈಯ್ಯಗೆಮಲುಆ

6 . . . . . . . ಆ ಸ್ತಳದ ಸೇನಬೋವಗಲುತಯಾಗೆ ಗಙ್ದಿಗ ೨೦೦ ವ . ರ . ದ . ಕಯಿಸಿ . . . ಜನದ ಸೇವೆಗೆಗಙ್ದಿ

7 . . . . ಅಂತ್ತು . ಗ ೧೫ ವ . . ಬಡವವರುಪ ೧ಕ್ಕೆಗ

8 . . . . ಮದ . . . ತಾಗೆ . ಂಜನಸೇವ ೧ . . . .

## 173

### ಅದೇ ದೇವಸ್ಥಾನದ ಪ್ರಾಕಾರದಲ್ಲಿರುವ 15 ಭಕ್ತ ವಿಗ್ರಹಗಳ ಪೀಠಗಳಲ್ಲಿ

(1) ಮಾರರುವಳಂಳಸುಧ್ರರು
(2) ಸರಾನಕರುಣಮಾನರು
(3). ಕಲಿಸಿತಿಗಾಣಗರು
(4) ನಿರುದಾಶಾದೂಲರು ಚೋಳಿ ಬ್ರಾಹ್ಮರು
(5) ಕಳಾನಾಥನೆಂಭ ಬ್ರಾಂಹ್ಮಾರು
(6) ಪ್ರತಾಪಸೂರ್ಯರು ಸಾಮಾನ್ಯ ಅರಸ
(7) ಅಪ್ಪರು
(8) ಮನಕೋಜ . ಕುಳಾಳರು
(9) ಧರ್ಮಕೇತನರು ಕ್ಷೇತ್ರಿಯರು
(10) ಮಾರರೋಮಯಾಬ ಬ್ರಾಂಹ್ಮರು
(11) ಮೂರ್ತಿನಾಥನೆಂಬ ವೈಶ್ಯರು
(12) ಗ . . . . ರು ಜಾತಿಯ
(13) ಬಾಲರ್ಪರು ಬ್ರಾಂಹ್ಮರು
(14) ಶ್ರೀ ನೀಲಕಂಠ ಕುಂಬಾರರು
(15) ಹುತವಳಿ ವೈಶ್ಯಸ್ತ್ರೀ

## 174

ಅದೇ ದೇವಸ್ಥಾನದಲ್ಲಿ ಪಂಚಲೋಹದ ದಕ್ಷಿಣಾಮೂರ್ತಿವಿಗ್ರಹದ ಪದ್ಮಪೀಠದ ಮೇಲೆ.

1 ಮಹಿಸೂರುದಳವಾಯಿದೊಡ್ಡೈಯನವರ ಪೌತ್ರರಾದ
2 ಕಳಲೆವೀರರಾಜೈಯ್ಯನವರ ಪುತ್ರ
3 ರಾದನಂಜರಾಜೈಯ್ಯನವರ ಶೇವೆ

## 175

ಅದೇ ದೇವಸ್ಥಾನದಲ್ಲಿ ತಾಂಡವೇಶ್ವರವಿಗ್ರಹದ ಪೀಠದ ಮೇಲೆ.

1 ಶ್ರೀರಂಗಪಟ್ಣದ ಶ್ರೀಗಂಗಾಧರೇಶ್ವರಸ್ವಾಮಿ ಧೇವಸ್ತಾನಕ್ಕೆ
2 ಸ್ವಸ್ತಿಶ್ರೀವಿಜಯಾಭ್ಯುದಯಶಾಲಿವಾಹನಶಕವರುಷಂಗಳು ೧೬೬೩ನೆ ಸಂದ
3 ವರ್ತಮಾನವಾದ ಪ್ಲವಸಂವತ್ಸರ ಜೇಷ್ಟ ಶುಧ ೧೫ಯಲು ಕಾಸ್ಯಪಗೋತ್ರರಾದ ಆಪಸ್ತ
4 ಭಸೂತ್ರರಾದ ಯಜುಶಾಖಾಧ್ಯಾಯಿಗಳಾದ ಶಿವಭಟ
5 ಥ್ಯಕ್ಷರಾದ ನಂಜುಂಡಭಟರ ಪುತ್ರರಾದ ಶಿವರಾಮಪಂಡಿತ
6 ನ ಸೇವೆ

## 176

ಅದೇ ಗ್ರಾಮದಲ್ಲಿ ನರಸಿಂಹದೇವಸ್ಥಾನದ ರಂಗಮಂಟಪದಲ್ಲಿ ಎಡಭಾಗದ ಕೊಠಡಿಯಲ್ಲಿರುವ ಕಂಠೀರವ ನರಸರಾಜರ ಪ್ರತಿಮೆಯ ಪೀಠದಲ್ಲಿ

1 ಕಂಠೀರವ ನರ | 2 ಸರಾಜವಡಯರುವರು

## 177

ಅದೇ ದೇವಸ್ಥಾನದ ಪ್ರಾಕಾರದಲ್ಲಿ ಎಡಗಡೆ ಕೊಠಡಿಯಲ್ಲಿರುವ ದೇಶಿಕವಿಗ್ರಹದ ಪೀಠದಲ್ಲಿ

ಗ್ರಂಥಾಕ್ಷರ.

## 178

ಅದೇ ವಿಗ್ರಹದ ಕೈಯಲ್ಲಿರುವ ಪುಸ್ತಕದಲ್ಲಿ

ಗ್ರಂಥಾಕ್ಷರ.

## 179

ಅದೇ ಗ್ರಾಮದಲ್ಲಿ ಪೇಟೆಯಲ್ಲಿರುವ ರಾಮದೇವರ ದೇವಸ್ಥಾನದಲ್ಲಿ ಒಳಬಾಗಿಲ ಎಡಕ್ಕೆ

1 ಸ್ವಸ್ತಿಜಯಾಭ್ಯುದಯಶಾಲಿವಾಹನಶಕ
2 ವರುಷ ೧೫೧೮ ಸಂದುವರ್ತಮಾನವಾದ ಧಾತುಸಂ .
3 ವರದ ಕಾಮಾಬರಲೂ . . . ಶ್ರೀಮನ್ಮಹಾರಾಜಾಧಿರಾಜರಾ
4 ಜಪರಮೇಶ್ವರ ಶ್ರೀವೀರಪ್ರತಾಪ ಶ್ರೀರಂಗರಾಯದೇವ
5 ಮಹಾರಾಯರು ಪೃಥ್ವೀರಾಜ್ಯಂಗೆಯಿತಿರಲು ಶ್ರೀಮ
6 ನ್ಮಹಾಮಂಡಲೇಶ್ವರರಾಮರಾಜರಾಮರಾಜಯ .
7 ವ ಮಹಾಅರಸುಗಳು ಶ್ರೀರಂಗಪಟಣದ ಸೀಮೆಯ
8 ನಾಯಿಂದರಿಗೆ ಕೊಟರು . . . . . ನರಲಿ . .
9 ನಶಿಲಾತಟ . . . . . . . . . . ದರೆ ಶ್ರೀರಂಗಪಟ
10 ಣದ ಸುಂಕ . . . . . . . . . . . . . . . . . . .
. . . . . . . . . . . . . . . . . . . . . . .

## 180

### ಅದೇ ಸ್ಥಳದಲ್ಲಿ.

1 ಸ್ವಸ್ತಿ ಶ್ರೀವಿಜಯಾಭ್ಯುದಯಶಾಲಿವಾಹನಶಕವ
2 ಷ೯ಂಗಳು ೧೬೩೪ನೆ ಸಂದವರ್ತಮಾನವಾದ
3 ದುರ್ಮತಿನಾಮಸಂವತ್ಸರದ ಚೈತ್ರಶು ೧ಲೂ ಶ್ರೀ
4 ಮದ್ರಾಜಾಧಿರಾಜ ರಾಜಪರಮೇಶ್ವರ ಪ್ರಹುಢ
5 ಪ್ರತಾಪನಪ್ರತಿಮವೀರನ:ಪತಿ ಶ್ರೀಮಹೀಶೂರನ
6 ಗರದ ಶ್ರೀಕೃಷ್ಣರಾಜವಡೆಯರೈಯ್ಯನವರು ರತ್ನಸಿ
7 ಂಹಾಸನಾರೂಢರಾಗಿ ಪೃಥ್ವೀಸಾಂಮ್ರಾಜ್ಯಂಗೈಯುತ್ತಿ
8 ರಲು ಶ್ರೀರಂಗಪಟ್ಟಣದಲೂನರಮ ಕಟ್ಟಿಹನು
9 ಮಾಸ್ ರಾಯಸ್ವಾಮಿಯವರಿಗೆ ಬರಸಿ ಪಪ್ರಸ್ತ ಶಿಲಾ
10 ಶಾಸನಕ್ರಮವಂತೆಂದರೆ ನಾಲು ಶ್ರೀರಂಗಪಟ್ಟಣ
11 ನಗರ ಚಂನಪಟ . ತಂ . ಊರೊ ಉಭಯ ಅಷ್ಟಗ್ರಾ
12 ಮಮುಂತಾದ ಗ್ರಾಮಗಳಲ್ಲಿ ಯಿರುವ ಕೆಲಸಿ
13 ಗಳ ವಾಲಗದವರೂ ನಾಲು ಅಕಸಾಗಳು ಕೋಮಟಿಗ
14 ರು ಮುಂತಾದ ಹದಿನೆಂ
15 ಟುಬಂಣದಲ್ಲೂಯ
16 ಲು ವಾಲಗ ಮಾಡಿದಾ
17 ಗುರೆಲುವಂದಾರಪ್ರ
18 ಕಾರಕ್ಕೆ ಕೊಟುಕೊಂ
19 ಡುಬಕಲ್ಲುಳವರು .
20 ದು ಬರೈಶಿಕೊಟಶಿಲಾಸಾನ | ಯಿದಕೆ ಸಾ
21 ಕ್ಷಿಗಳು ಸೂರ್ಯ್ಯಚಾಂದ್ರರು ಅಷ್ಟದಿಕ್ಕ
22 ಪಾಲಕರು ಯಿದತಪ್ಪಿದರೆ ಕಾಸೀಲಿ ಗೋಹತ್ಯ
23 ಮಾಡಿದವರು
24 . . . ದಶಿಲಾಶಾ
25 . . ರಣಾಸಿಯಲ್ಲಿ
26 . . . ಗೋಉಗಳ .
27 ಹೋಗ.ವರು

## 181

### ಅದೇ ಗ್ರಾಮದ ಆದೀಶ್ವರಬಸ್ತಿಯ ಮುಖಮಂಟಪದಲ್ಲಿ ಎಡಗಡೆ ಗೋಡೆಗೆ ಸೇರಿದ ಕಂಭದಲ್ಲಿ.

1 ಶ್ರೀ ಶಕವರ್ಷ ೧೪೪೯ನೆತ್ತನೆಯ ಪರಾಭ
2 ವಸಂವತ್ಸರದ ಆಷಾಢ ಶು ೭
3 ಲುಶ್ರೀರಂಗಪಟ್ಟಣದ ಆದೀಶ್ವ
4 ರರ ಭಂಡಾರಕೆ ಚಾರುಕೀರ್ತ್ತಿ
5 ಪಂಡಿತಾಚಾರ್ಯ್ಯರ ಶಿಷ್ಯರಾದ ಪಾ
6 ಯಂಣಗಳು . ಜಯ್ಯನವರು ಕೊ
7 ಟ್ಟದಿನಗ ೨೪೯ಕ್ಕೆ ಬಡ್ಡಿಕ ಗು ೩೪೭ಕ್ಕೆ
8 ಅಷ್ಟಾಹ್ನಿಕದ ಧರ್ಮ್ಮವನು ಶ್ರೀ
9 ಸಿತಾಳ ಮಳಿಗೆಯ ಸಮಸ್ತರು ನೆಲತರವಾ
10 ಗಿ ನಡಸಿ ಕೊಡಲುಳ್ಳವರುಯೆಂದು ಬರಶಿ
11 ಕೊಟ್ಟ ಶಾಸನ ಯಿದಕೆ ವಿಘ್ನವ ಮಾಡಿದ
12 ವನು ನರಕಾದಿದುರ್ಗತಿಗೆ ಹೋಗುವನು
13 ಶ್ರೀ ಶ್ರೀ ಶ್ರೀ ಶ್ರೀ

## 182

### ಅದೇ ಗ್ರಾಮದ ಕಾಳಮ್ಮನ ದೇವಸ್ಥಾನದಲ್ಲಿ ಕಮಠೇಶ್ವರದೇವರ ಬಾಗಿಲ ಹಿತ್ತಾಳತಗಡಿನ ಮೇಲೆ.

1 ಶ್ರೀವಿಜಯಾಭ್ಯು
2 ದಯಶಾಲೀವಹಾನ
3 ಶಖವರ್ಷಂಗಳೂ
4 ೧೫೪೭ನೆ ರಕ್ತಾಕ್ಷಿ ಸಂ|
5 ಭಾದ್ರಪತ ಶುಧ ೧೫
6 ಲ್ಲು ಶ್ರೀಮತ್ಕಾಳಿಕಾಂ
7 ಬಕಮಠೇಶ್ವಸ್ವ
8 ಮಿ ಸಂನಿಧಿಗೆ ||
9 ಸುಪರ್ನಸಗೋತ್ರ
10 ಕಾತ್ಯಾಯನಸೂತ್ರ
11 ಪ್ರಣಮಶ್ಯಾಖ ಈ
12 ಶಾಂನ್ಯಪ್ರವರೋತ್ಪಂ
13 ನ್ನರಾದ ಯಜಮಾ
14 ನರುಗೋಪಾಲೈಯ್ಯ
15 ನವರ ಕುಮಾರ ಲಕ್ಕ
16 ನಾಚಾರ್ಯರ ಶೇವಾರ್ಥ

## 183

ಅದೇ ದೇವಸ್ಥಾನದ ಕಂಚಿನ ತಟ್ಟೆಯ ಮೇಲೆ.

1 ಕರುಪ್ರಸಟಿಯಿಂಚಿದಿ
2 ತತಕಳಿವುಗುಡಿಕಿಯುಚಿದಿ

## 184

ಅದೇ ತಟ್ಟೆಯ ಮೇಲೆ.

ಅರವಕ್ಷರ.

## 185

ಅದೇ ದೇವಸ್ಥಾನದ ತಾಂಡವೇಶ್ವರವಿಗ್ರಹದ ಪೀಠದಲ್ಲಿ.

1 ಸ್ವಸ್ತಿಶ್ರೀ ವಿಜಯಾಭ್ಯುದಯಶಾಲಿವಾಹನಶಕವರುಷಂಗಳು ೧೭೧೪ನೆ ಪರಿಧಾವಿಸಂವತ್ಸರದ ಮಾರ್ಗ
2 ಶಶುಧ ೧೦ ಯಲ್ಲು ಶ್ರೀರಂಗಪಟ್ಟಣದ ಶ್ರೀಕಾಳಮ್ಮನವರ ದೇವಸ್ಥಾನಕ್ಕೆ ಮೈಸೂರುನಗರದ ಶ್ರೀಕೃಷ್ಣರಾಜವಡೆ ಯರೈಯ್ಯನವರ ಪಾದಚಾರಕನಾ
3 ದಶಷ್ಟಬ್ರಾಹ್ಮವಂಶಸ್ತನಾದ ಖಾಸಬೊಕ್ಕಸದ ಲಂಗಾಚಾರಿ ಕೊಮಾರನಾದ ಸುನಾರಖಾನೆ ರಂಗಾಚಾರಿಯವರು ಮಾಡಿ ಮಟಿಸಿದ ತಾಂಡವೇಶ್ವರ

## 186

ಅದೇ ಪೀಠದ ಕೆಳಭಾಗದಲ್ಲಿ.

ಶಿವಕಾಮಿನಿ ಮೂರ್ತಿ ಸೇವೆ

(ಅದರ ಕೆಳಗಣ ಪಟ್ಟಿಯಲ್ಲಿ)

ಮಯವಂಶಸ್ತನಾದ ಕೃಷ್ಣಮಾಚಾರಿಕೊಮಾರನಾದ ವೆಂಗಟರಮಣಾಚಾರಿಯು ಮಾಡಿದಂತಾ ತಾಂಡವಮೂರ್ತಿ ಶಿವಕಾಮಿನಿ

## 187

ಅದೇ ಗ್ರಾಮದ ಊರುಮುಂದಣ ಮಾರಮ್ಮನ ಗುಡಿಯಲ್ಲಿ ನಟ್ಟಕಲ್ಲು.

ಪ್ರಮಾಣ—3′ × 9″

1 ಸ್ವಸ್ತಿಶ್ರೀ ವಿಜಯಾಭ್ಯುದಯ
2 ಶಾಲಿವಾಹನಶಖಾವರುಷಂ
3 ಗಳು ೧೭೪೫ ಸಂದ ವರ್ತಮಾ
4 ನವಾದ ದುಂದುಭಿಸಂ ಜೇಷ್ಠ
5 ಶುದ್ಧ ೩ ಸ್ತಿರವಾರ ಪಾರಾಭ್ಯಶ್ರೀರ
6 ಂಗಪಟ್ಟಣಸಂಣನರಕೋಟೆ . .
7 ಣಗಂಜಾಂ . . ಭಯ . ಕೊ
8 ಗ್ರಾಮ · · · ಯಿ · · ಸಕ
9 ಲಕೋಟಿನು · · · · ನವರು
10 ಮಾಡಿದ ಕಾರ್‍ಯ ಮಾರಿಗುಡಿ ಜೀ
11 ರ್ಣೋದಾರ ದೇವಾಲಯ ಕಟೂವ
12 ದಕೆ ಹನುಮಂತೈನ ಮಗಬಿಲ್ಲ
13 ತಿಂಮ್ಮೈನ ಗೊತ್ತು ಮಾಡಸೀ
14 ವೆಲ್ಲರು · · ಕೊಟ್ಟು ಜೀರ್ಣೋದ್ಧಾ
15 ರಮಾಡಿಸಿ ಕಟಿಸಿಯಿರುವ
16 ದೇವಾಲಯ ಮಾರಿಪೂಜೆ
17 ಮಿರ್ತದಂತೆ ಸದಾಕಾಲ ಸೇ
18 ವೆ ನಡಸುತ್ತ ಸರ್ವೇಜನಾ ಸು
19 ಖಿನೋ ಭವಂತು ||
20 ಯಿಲ್ಲಿ ಕಾವಲು ದುಬಾಸಿ
21 ಮಗನ ವಂಶಸ್ತರದೂ ||

## 188

ಅದೇಗ್ರಾಮದಲ್ಲಿರುವ ಸಂಗೀಮಸೀತಿಯ ಉತ್ತರಗೋಡೆಗೆ ಒರಗಿ ನಿಂತಿರುವ ಕಲ್ಲು.

ಪ್ರಮಾಣ—4′9″ × 2′9″

(ಚಕ್ರ, ತಂಗಲೆನಾಮ, ಶಂಖ.)

1 ೯ ಉನ್ಮುಸಂವತ್ಸರದ ಭದ್ರಪದಸು ೧೦ ಶ್ರೀಮತೇರಾಮಾನು
2 ಜಾಯನಮಃ | ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾಚಾರ್ಯ

